# CHANDŌMBUDHI

## OF NAGAVARMA I

## ಛಂದೋಂಬುಧಿ

(ಪ್ರಥಮ ನಾಗವರ್ಮ ವಿರಚಿತಂ)


EDITED BY

*Vidwan*, H. S. Ramaswamy Iyengar,

***Kannada Lecturer, Women's Christian College,***
***Nungambakkam, Madras.***





PUBLISHED BY

SREEVATHSA PRESS

Madras.

**1946**




**[Price Rs. 1—8—0.**

# CHANDŌMBUDHI

## OF NAGAVARMA I

## ಛಂದೋಂಬುಧಿ

(ಪ್ರಥಮ ನಾಗವರ್ಮ ವಿರಚಿತಂ)



EDITED BY

*Vidwan* H. S. Ramaswamy Iyengar,

*Kannada Lecturer, Women's Christian College,*
*Nungambakkam, Madras.*

PUBLISHED BY

SREEVATHSA PRESS

Madras.

1946

 [Price Rs. 1—8—0.

# ಮುನ್ನುಡಿ

## ಮುದ್ರಣ ವಿಚಾರ

ಈ ಗ್ರಂಥವು ಮದ್ರಾಸ್ ಸರ್ಕಾರದ ಪ್ರಾಚ್ಯಕೋಶಾಲಯದಲ್ಲಿ (Govt. Oriental Library ಶೇಖರಿಸಲ್ಪಟ್ಟಿರುವ ೭ ಹಸ್ತಲಿಖಿತಪ್ರತಿಗಳ ಆಧಾರದಿಂದ ಮುದ್ರಿತವಾಗಿದೆ. ಇವುಗಳಲ್ಲಿ ಎರಡು ಕಾಗದದ ಪ್ರತಿಗಳು ಸಮಗ್ರವಾದುವು; ಐದುಪ್ರತಿಗಳು ತಾಳಪತ್ರಾತ್ಮಕವಾದುವು, ಇವುಗಳಲ್ಲಿ ಎರಡು ಅಸಂಪೂರ್ಣಗಳು. ಇವುಗಳಲ್ಲಿ ಭಿನ್ನ ಭಿನ್ನಗಳಾದ ಅಶುದ್ಧ ಪಾಠಗಳು ವಿಶೇಷವಾಗಿವೆ. ಅಲ್ಲದೆ ಬೇರೆ ಬೇರೆ ಹಲವು ಗ್ರಂಥಗಳ ಅಲ್ಪ ಸ್ವಲ್ಪ ಭಾಗಗಳೂ ಅಲ್ಲಲ್ಲಿ ಮಿಶ್ರಿತವಾಗಿವೆ. ಇವುಗಳನ್ನೆಲ್ಲಾ ತಕ್ಕಮಟ್ಟಿಗೆ ಬೇರ್ಪಡಿಸಿ, ಸಂದಿಗ್ಧವಾದುವುಗಳನ್ನು ರೇಖೆಯ ಕೆಳಗೂ, ಉಳಿದುವನ್ನು ಪರಿಶಿಷ್ಟದಲ್ಲೂ ಕೊಟ್ಟಿದೆ. ಹಲವನ್ನು ಅನುಪಯುಕ್ತವೆಂದು ಸ್ವೀಕರಿಸಲಿಲ್ಲ. ನಾವು ಹೊಸದಾಗಿ ಸೇರಿಸಿರುವ ಭಾಗವನ್ನು [ ] ಚೌಕ ಕಂಸದಲ್ಲೂ, ಪಾಠಾಂತರಗಳನ್ನು ( ) ದುಂಡು ಕಂಸದಲ್ಲೂ ಕೊಟ್ಟಿದೆ. ಷಟ್ಪ್ರತ್ಯಯಗಳ ವಿವರಣವನ್ನು ಸ್ವಂತವಾಗಿ ಬರೆದು ಸೇರಿಸಿದೆ. ವಿಶೇಷ ವಿಷಯಗಳಿಗೆ ಟಿಪ್ಪಣವನ್ನೂ, ವಿಮರ್ಶಾತ್ಮಕವಾದ ಮುನ್ನುಡಿಯನ್ನೂ ಸೇರಿಸಿದೆ

## ಛಂದಸ್ಸು

“ಛಂದ” ಶಬ್ದವು “ಚದಿ ಆಹ್ಲಾದೇ” ಆಹ್ಲಾದಾರ್ಥಕವಾದ 1“ಚದಿ” ಧಾತುವಿನಮೇಲೆ “ಅಸುನ್” ಪ್ರತ್ಯಯವು ಸೇರಿ ನಿಷ್ಪನ್ನವಾದುದೆಂದು (ಚದೇರಾದೇಶ್ಛಃ ೪–೨೧೮) ಪಾಣಿನಿಕೃತವಾದ ಉಣಾದಿ ಸೂತ್ರದಿಂದ ಸಾಧಿಸಲ್ಪಟ್ಟು ವೇದ ಎಂದು ಅರ್ಥವೆಂದು, ಆ ಸೂತ್ರವೃತ್ತಿಗಳಲ್ಲಿ ಹೇಳಿದೆ, ಆಹ್ಲಾದಾರ್ಥಕವಾದ ಛಂದಶ್ಶಬ್ದವು ಅಕ್ಷರ ರಾಶಿರೂಪವಾದ ವೇದಗಳಲ್ಲಿ ವರ್ತಿಸಲು ಪ್ರವೃತ್ತಿನಿಮಿತ್ತವೇನೆಂಬ ಶಂಕೆಯು ಹುಟ್ಟುವುದು ಸಹಜವಾಗಿದೆ. ವೈದಿಕಾನ್ ಎಂಬ ಶಬ್ದವನ್ನು ಅಧ್ಯಾಹಾರಮಾಡಿಕೊಂಡು (ಆಹ್ಲಾದಯತಿ ವೈದಿಕಾನ್) ವೈದಿಕರನ್ನು (ವೇದಬಲ್ಲವರನ್ನು) ಸಂತೋಷಗೊಳಿಸುವುದು ಎಂಬ ಅರ್ಥವೇ ಪ್ರವೃತ್ತಿನಿಮಿತ್ತವಾಗಲು ಛಂದಶ್ಶಬ್ದವು ವೇದಕ್ಕೆ ಅನ್ವರ್ಥವಾಗಿರುವುದು.

---

(1) ಚದಿ+ಅಸುನ್ = (ಇದಿತ್ತ್ವಾದುದರಿಂದ ನುಮಾಗಮ) ಚದಿ+ನುಮ್+ಅಸುನ್= ಚನ್ದ್+ಅಸ್=(ಆದಿಯ ಚಕಾರಕ್ಕೆ ಛಕಾರ) ಛನ್ದಸ್(ಎಂದು ಶಬ್ದರೂಪ ನಿಷ್ಪತ್ತಿ) ಚದೇರಾದೇಶ್ಛಃ– ಚದೇಃ ಅಸುನ್ ಪ್ರತ್ಯಯೋ ಭವತಿ, ಆದೇಃ ಛಕಾರಾದೇಶಃ ಚನ್ದತಿ ಆಹ್ಲಾದಯತಿ ವೈದಿಕಾನ್, ಇತಿ ಛಂದಃ ವೇದ ಇತಿ ಯಾವತ್ – ಇನ್ನೂ ಕೆಲವು ವೃತ್ತಿಗಳಲ್ಲಿ ವೇದದಲ್ಲಿರುವ ಗಾಯತ್ರ್ಯಾದಿಗಳು ಎಂದು ವಿವರಿಸಿದೆ.

[1]ಛದಿಧಾತುವಿನಿಂದ ಈ ಶಬ್ದವನ್ನು ನಿಷ್ಪತ್ತಿ ಮಾಡುವುದೂ ಉಂಟು. ವೇದವು ಅಧ್ಯಯನ ಮಾಡಿ ಜಪಿಸುವವರ (ವೇದವನ್ನು ಜಪಮಾಡಬಹುದೆಂದು ಹೇಳಿದೆ) ಪಾಪವನ್ನು ಹೋಗಲಾಡಿಸುವುದರಿಂದ ಛಾದಯತಿ ಪಾಪಾನೀತಿ ಎಂಬ ವ್ಯುತ್ಪತ್ತಿಯಿಂದಲೂ ಈ ಶಬ್ದವು ವೇದ ವಿಷಯದಲ್ಲಿ ಅನ್ವರ್ಥವಾಗಿರುವುದು, ಮತ್ತು[2]ಛಂದ ಎಂಬ ಅಕಾರಾಂತವಾದ ಶಬ್ದವೂ ಒಂದುಂಟು, ಅದಕ್ಕೆ ಅಭಿಪ್ರಾಯವೆಂದು ಅರ್ಥವು, "ಛದಅಪವಾರಣೇ" ಅಪವಾರಣಾರ್ಥಕವಾದ ಛದಧಾತುವಿನಿಂದ "ಛದೇರ್ನಶ್ಚ" ೪–೬೫) ಎಂಬ ಉಣಾದಿ ಸೂತ್ರದಿಂದ ನಿಷ್ಪನ್ನವಾದುದೆಂದೂ, ಛಾದಯತಿ ಪಾಪಂ (ಪಾಪವನ್ನು ಮುಚ್ಚುವುದು ಎಂದರೆ, ನಾಶಮಾಡುವುದು ಎಂದೂ) ಇತಿ ಛಂದಃ (ವೇದಃ) ವೇದ ಎಂಬ ಅರ್ಥವುಳ್ಳುದೆಂದೂ ವ್ಯಾಕರಣದಲ್ಲಿ ಈ ಶಬ್ದನಿಷ್ಪತ್ತಿಯು ಸಾಧಿಸಲ್ಪಟ್ಟಿದೆ, ಈ ಎರಡು ಬಗೆಯಲ್ಲೂ "ಛಂದಸ್" ಶಬ್ದಕ್ಕೆ ವೇದ ಎಂಬರ್ಥವೇ ಅಭಿಹಿತವಾಗಿರುವುದರಿಂದ ಅರ್ಥದಲ್ಲಿ ಮಾತ್ರ ಭಿನ್ನಾಭಿಪ್ರಾಯವಿಲ್ಲ, "ಕವಿಜನಾಶ್ರಯ" ವೆಂಬ 'ಛಂದೋವಿಚಿತಿ" ಯಲ್ಲಿ "ಅವದ್ಯಾನಿ ಆಶ್ಚರ್ಯತಯಾ ಆಚ್ಛಾದಯತಿ (ದೋಷಗಳನ್ನು ಆಶ್ಚರ್ಯಕರವಾಗಿ ಆಚ್ಛಾದಿಸುವುದು, ಹಾಳುಮಾಡುವುದು) ಎಂದು ವ್ಯುತ್ಪತ್ತಿ ಹೇಳಿದೆ.

ಅಕ್ಷರಗಳ (ಶಬ್ದಗಳ) ರಾಶಿಯೇ ವೇದವು; ವೇದದಲ್ಲಿರುವ ಅಕ್ಷರ ರಾಶಿಗಳು ಅನಿಯುತವಾಗಿಲ್ಲ, ಒಂದು ನಿಯುತವಾದ ರೀತಿಯಲ್ಲಿರುವುವು ಇಷ್ಟು ಅಕ್ಷರಗಳಿಗೆ ಈ ಹೆಸರು ಎಂದು ವೇದಾಕ್ಷರ ರಾಶಿಗಳೆಲ್ಲವೂ ವಿಭಕ್ತವಾಗಿ ಹಲವು ಸಂಜ್ಞೆಗಳನ್ನು ಪಡೆದಿರುವುವು. ಉದಾಹರಣವಾಗಿ [3]"ಗಾಯತ್ರಿ" ಎಂಬ ಹೆಸರಿನ ಅಕ್ಷರ ರಾಶಿಗಳು ವೇದದಲ್ಲಿವೆ ಈ ಗಾಯತ್ರಿಯು ೨೪ ಅಕ್ಷರಗಳನ್ನು ಒಳಕೊಂಡಿರುವುದು. ಹೀಗೆ ನಾಲ್ಕು ನಾಲ್ಕು ಅಕ್ಷರಗಳಂತೆ ಹೆಚ್ಚುತ್ತಾ ೧೦೪ ಅಕ್ಷರಗಳವರೆಗೂ ಉಷ್ಣಿಗ್, ಅನುಷ್ಟುಪ್, ಮೊದಲಾದ ಹೆಸರನ್ನು ಪಡೆದಿರುವುವು. ಈ ಗೊತ್ತಾದ ಅಕ್ಷರಗಳು ಸಾಮಾನ್ಯವಾಗಿ ನಾಲ್ಕು ಭಾಗವಾಗಿ ವಿಭಾಗಿಸಲ್ಪಟ್ಟು ಪಾದವೆಂಬ ಹೆಸರನ್ನು ಪಡೆದಿರುವುವು. ಈ ಪ್ರತಿಯೊಂದು

---

(1) ಇವಲ್ಲದೆ ಛದಿರೂರ್ಜನೆ (ಭ್ವಾದಿ) ಛಾದಯತಿ— ಛದಸ್ತಂ ಪ್ರಯುಙ್ಕ್ತೆ- ಬಲವಂತಂ ಪ್ರಾಣವಂತಂ ವಾಕರೋತಿ— ಎಂದು ಛದಿಧಾತುವಿನಿಂದ ಛಂದಸ್ ಶಬ್ದವನ್ನು ನಿಷ್ಪತ್ತಿ ಮಾಡಬಹುದೆಂದೂ ಆಗ ಛಂದಶ್ಶಬ್ದಕ್ಕೆ ಬಲವನ್ನು ಪಡೆಯುವಂತ ಮಾಡುವುದು ಎಂದರೆ ವೇದವು ಉಪನೀತನಾದ ಬ್ರಾಹ್ಮಣನಿಂದ ಅಧ್ಯಯನ ಮಾಡಲ್ಪಟ್ಟು, ಅವನನ್ನು ಬ್ರಹ್ಮತೇಜಸ್ಸಿನಿಂದ ಬಲವಂತನನ್ನಾಗಿ ಮಾಡುವುದು ಎಂಬ ತಾತ್ಪರ್ಯದಿಂದ ವೇದವೆಂದು ಅರ್ಥವನ್ನು ಹೇಳಬಹುದೆಂದೂ ಕೆಲವರು ವೈಯಾಕರಣರು ವಿವರಿಸಿರುವರು [illegible] ಪ್ರೃಷ್ಠ, ಆಭ್ಯಾಂ ಸುಕ್, ಹ್ರಸ್ವಶ್ಚ, ಛಂದಸ್ ಗಾಯತ್ರ್ಯಾದಿ (ರಂಹಸ್—ವೇಗಃ) ಸರಸ್ವತೀ ಕಂಠಾಭರಣ (ಉಣಾದಿವೃತ್ತಿ), (2) ಸ್ವಚ್ಛಂದಾಹಿ ಪ್ರವೃತ್ತಿಃ-ಎಂದು, ಪ್ರಯೋಗವು- ಅಭಿಪ್ರಾಯಚ್ಛಂದ ಆಶಯಃ (ಅಮರಕೋಶ). (3) ಇವು ಏಳೇಳು ಒಂದೊಂದಾಗಿ ಮೂರು ಗುಂಪಾಗಿರುವುವು.

ಪಾದವೂ ಸಮಾಸವಾದ ಅಕ್ಷರಗಳನ್ನು ಪಡೆದಿರುವುವು. ಆದರೆ 1" ಗಾಯತ್ರಿ " ಎಂಬ ೨೪ ಅಕ್ಷರದ ರಾಶಿಯು ೩ ಭಾಗವಾಗಿ ವಿಭಾಗಿಸಲ್ಪಟ್ಟು (ಪಾದ) ಪ್ರತಿಯೊಂದು ಭಾಗಕ್ಕೂ ಎಂಟು ಅಕ್ಷರಗಳನ್ನು ಪಡೆದಿದೆ. ಒಟ್ಟದಲ್ಲಿ ವೇದವನ್ನು ಮುಖ್ಯವೃತ್ತಿಯಿಂದ ಹೇಳುವ ಛಂದಶ್ಶಬ್ದವು ವೇದಾಕ್ಷರಗಳ ವಿಭಾಗವೆನಿಸಿದ ಗಾಯತ್ರ್ಯಾದಿಗಳಲ್ಲಿಯೂ ಲಕ್ಷಣಾವೃತ್ತಿಯಿಂದ ವರ್ತಿಸಿರುವುದು. ಹೀಗೆ ನಿಯತಾಕ್ಷರರಾಶಿಗಳಾಗಿ ವಿಭಾಗಿಸಲ್ಪಟ್ಟಿರುವ ವೇದಾವಯವಭೂತಗಳಾದ ಗಾಯತ್ರ್ಯಾದಿಗಳಿಗೂ ಛಂದಸ್ಸೆಂದು ವ್ಯವಹಾರವುಂಟಾಗಿರುವುದು.

ಗೀರ್ವಾಣ ಭಾಷಾ ಶಬ್ದಗಳು ವೈದಿಕ ಲೌಕಿಕಗಳೆಂದು ಎರಡು ಭಾಗವಾಗಿರುವುವು. ಇವೆರಡುಬಗೆಯ ಶಬ್ದಗಳೂ ಸ್ವರೂಪದಲ್ಲಿ ಹೇಗೆ ವಿಶೇಷವಾಗಿ ಭಿನ್ನಭಿನ್ನಗಳಾಗಿರುವುವೋ, ಹಾಗೆಯೇ ಛಂದಸ್ಸೂ ಕೂಡ ವೈದಿಕಲೌಕಿಗಳೆಂದು ಎರಡುಬಗೆಯಾಗಿ ಪರಸ್ಪರ ವೈಲಕ್ಷಣ್ಯವುಳ್ಳದಾಗಿರುವುದು 2ವೇದಗಳಲ್ಲಿ ಪ್ರಯುಕ್ತವಾಗಿರುವ ಶಬ್ದಗಳೆಲ್ಲವೂ ವೈದಿಕಗಳು. ವೇದೇತರ ಗ್ರಂಥಗಳಲ್ಲಾಗಲಿ, ಮನುಷ್ಯರ ವಾಗ್ವ್ಯವಹಾರದಲ್ಲಾಗಲಿ ಇರುವ ಶಬ್ದಗಳು ಲೌಕಿಕಗಳು ಹಾಗೆಯೇ ವೇದದಲ್ಲಿ ಪ್ರಯುಕ್ತವಾಗಿರುವ ಛಂದಸ್ಸುಗಳು ವೈದಿಕಗಳು, ಲೋಕವ್ಯವಹಾರದಲ್ಲಿರುವ ಕಾವ್ಯನಾಟಕಾದಿಗಳಲ್ಲಿ ಉಪಲಭ್ಯಮಾನವಾಗುವ ಛಂದಸ್ಸುಗಳು ಲೌಕಿಕಗಳು. ಲೌಕಿಕಗಳಲ್ಲಿ ನಾಲ್ಕು ಅಕ್ಷರಗಳಿಂದ ಆರಂಭಿಸಿ ೧೦೪ ಅಕ್ಷರಗಳವರೆಗೆ ಉಕ್ತಾದಿ – ಉತ್ಕೃತಿವರೆಗೆ ಇಪ್ಪತ್ತಾರು ಛಂದಸ್ಸುಗಳು ಇರುವುವು. ಇವುಗಳಲ್ಲಿ ೨೪ ಅಕ್ಷರಗಳಿಂದ ಮುಂದಣ ೨೧ ಛಂದಸ್ಸುಗಳು ಏಳೇಳು ಛಂದಸ್ಸುಗಳಿಗೆ ಒಂದೊಂದು ಗುಂಪಾಗಿ ಮೂರುಗುಂಪಾಗಿ ಛಂದಶ್ಶಾಸ್ತ್ರದಲ್ಲಿ ವ್ಯವಹರಿಸಲ್ಪಟ್ಟಿರುವುದು. ಗಾಯತ್ರಿಯಿಂದ ಕೆಳಗಿರುವ ಉಕ್ತಾದಿ ಸುಪ್ರತಿಷ್ಠೆವರೆಗೆ ಇರುವ (೪ರಿಂದ ಇಪ್ಪತ್ತಕ್ಷರ) ೫ ಛಂದಸ್ಸುಗಳೂ ವೇದಗಳಲ್ಲಿಲ್ಲ. ಅಲ್ಲದೆ ಆದರಲ್ಲಿರುವ ಗಾಯತ್ರ್ಯಾದಿಛಂದಸ್ಸುಗಳೂ ಕೂಡ ಆಸುರೀ ಮಾನುಷೀ ದೈವೀ ಮೊದಲಾಗಿ ೮ ಭಾಗವಾಗಿ ವಿಂಗಡಿಸಲ್ಪಟ್ಟು ಹೆಚ್ಚು ಕಡಿಮೆ ಅಕ್ಷರಗಳುಳ್ಳದಾಗಿವೆ. ಈ ಬಗೆಯ ವಿಭಾಗಗಳು ಲೌಕಿಕ ಛಂದಸ್ಸಿನಲ್ಲಿಲ್ಲ. ವೈದಿಕ ಛಂದಸ್ಸು ಮುಖ್ಯವಾಗಿ ಇಷ್ಟಿಷ್ಟೇ ಅಕ್ಷರಗಳಿರಬೇಕೆಂದು ಅಕ್ಷರಸಂಖ್ಯಾನಿಯಮವನ್ನು

---

(1) ಗಾಯತ್ರಿಯ ಒಂದು ಪಾದಕ್ಕೆ ೮ ಅಕ್ಷರಗಳಿರುವುದು (೨೪ ÷ ೩ = ೮) ಆದರೆ ಅನುಷ್ಟುಪ್ ಎಂಬ ಅಕ್ಷರ ರಾಶಿಯ ಪಾದಗಳಲ್ಲೂ ೮ ಅಕ್ಷರಗಳುಂಟು. ಇವೆರಡಕ್ಕೂ ವ್ಯತ್ಯಾಸವೇನು ಎಂಬ ಶಂಕೆಯು ಹುಟ್ಟುವುದು. ಎಂಟೆಂಟು ಅಕ್ಷರಗಳ ೩ ಪಾದವುಳ್ಳದು (೨೪ ಅಕ್ಷರ) ಗಾಯತ್ರಿ, ಎಂಟೆಂಟು ಅಕ್ಷರಗಳ ನಾಲ್ಕು ಪಾದ (೩೨) ಗಳುಳ್ಳದು ಅನುಷ್ಟುಪ್ ಎಂದು ವಿವೇಕವು. (2) ಅಥ ಶಬ್ದಾನುಶಾಸನಂ ಕೇಷಾಂ ಶಬ್ದಾನಾಂ, ವೈದಿಕಾನಾಂ ಲೌಕಿಕಾನಾಂಚ (ಪಾಣಿನಿ ವ್ಯಾಕರಣಭಾಷ್ಯ).

ಮಾತ್ರ ಪಡೆದಿರುವುದಲ್ಲದೆ ಬೇರೆ ನಿಯಮಗಳಿಲ್ಲ. ಲೌಕಿಕ ಛಂದಸ್ಸಾದರೋ ಅಕ್ಷರ ನಿಯಮದ ಜತೆಗೆ ಗುರು ಲಘ್ವಕ್ಷರಗಳ ನಿಯಮವನ್ನೂ ಪಡೆದಿದೆ. ಲೌಕಿಕ ಛಂದಸ್ಸಿನಲ್ಲಿ ಒಂದೊಂದರಲ್ಲೂ ಗುರು ಲಘ್ವಕ್ಷರಗಳವಿನ್ಯಾಸಾನುಗುಣವಾಗಿ ಹಲವು ವೃತ್ತಗಳು ಹೆಸರಿನೊಡನೆ ಏರ್ಪಡಿಸಲ್ಪಟ್ಟಿರುವುವು ವೈದಿಕ ಛಂದಸ್ಸಿನಲ್ಲಿ (ವೃತ್ತಪ್ರಕರಣದಲ್ಲಿ) ಸಮವೃತ್ತಗಳಲ್ಲದೆ, ಅರ್ಧಸಮ ವಿಷಮವೃತ್ತಗಳೆಂಬ ಭೇದಗಳಿಲ್ಲ. ಲೌಕಿಕ ಛಂದಸ್ಸಿನಲ್ಲಿ ಸಮ, ಅರ್ಧಸಮ, ವಿಷಮ ಎಂದು ಮೂರು ಭೇದಗಳುಂಟು ಆದರೆ ವೈದಿಕ ಛಂದಸ್ಸಿನಲ್ಲಿ ಅರ್ಧಸಮ ವೃತ್ತಗಳು ದೊರೆಯದಿದ್ದರೂ, ವಿಷಮ ವೃತ್ತಗಳು ಎಂದರೆ ಪ್ರತಿ ಪಾದವೂ ನ್ಯೂನಾಧಿಕಾಕ್ಷರಗಳುಳ್ಳವು ವಿಶೇಷವಾಗಿದೆ. ಈ ಕ್ರಮವು ಪಿಂಗಳ ಛಂದಸ್ಸಿನಲ್ಲಿ (ಅಧ್ಯಾಯ ೩. ಸೂ. ೧೧)ಹೇಳಿದೆ [1]ಮೂರು ಪಾದವುಳ್ಳ ಗಾಯತ್ರಿಯ ಒಂದನೆಯ ಪಾದದಲ್ಲಿ ೬ ಅಕ್ಷರಗಳು ಎರಡನೆಯ ಪಾದದಲ್ಲಿ ಎಂಟಕ್ಷರಗಳು, ಮೂರರಲ್ಲಿ ಏಳಕ್ಷರಗಳು ಇರುವುದೆಂದು ಹೇಳಿರುವುದರಿಂದ ವಿಷಮವೃತ್ತಗಳೂ ಆಗಬಹುದೆಂಬುದಕ್ಕೆ ಇದು ನಿರ್ದೇಶವಾಗಿದೆ.

ಮಾತ್ರಾವೃತ್ತಗಳ ಗಂಧವೇ ವೈದಿಕ ಛಂದಸ್ಸಿನಲ್ಲಿಲ್ಲ, ಲೌಕಿಕದಲ್ಲಾದರೋ ಮಾತ್ರಾವೃತ್ತಗಳೇ ವಿಶೇಷವಾಗಿ ಪ್ರಚಾರದಲ್ಲಿವೆ [2]

## ಛಂದಃಪ್ರಸರ

ಆದಿಕಾಲದಲ್ಲಿ (ಕೃತಯುಗದಲ್ಲಿ) ವೇದವನ್ನು ಬಿಟ್ಟು ಉಳಿದ ಲೌಕಿಕ ಭಾಷೆಯಲ್ಲಿ ಛಂದಸ್ಸೆಂಬುದೇ ಇರಲಿಲ್ಲ ಕೃತಯುಗದ ಅಂತ್ಯಕಾಲದಲ್ಲಿ ಮನುಷ್ಯರ ಬುದ್ಧಿಯಲ್ಲಿ ಹ್ರಾಸವೂ, ಮಾಂದ್ಯವೂ ತಲೆದೋರುತ್ತಾ ಬಂದಹಾಗೆಲ್ಲಾ ವೇದದಲ್ಲ ಸೂಕ್ಷ್ಮವಾಗಿ ಹೇಳಿರುವ ಅರ್ಥಗಳಿಗೆ ವಿವರಣವು ಆವಶ್ಯಕವಾಯಿತು ಅಲ್ಲದೆ ವೇದಭಾಗಗಳೂ ಹಾಗೆಹಾಗೆ ಖಿಲವಾಗುತ್ತಲೂ ಬಂದುವು. ಆದುದರಿಂದ ಆ ಕಾಲದಲ್ಲಿ ಋಷಿಗಳು ವೇದಾರ್ಥಗಳನ್ನು ಸ್ಮರಣೆಗೆ ತರತಕ್ಕ ಸ್ಮೃತಿಗನಳ್ನು ರಚಿಸಬೇಕಾಯಿತು. ಮನು, ಯಜ್ಞವಲ್ಕ್ಯ ಮೊದಲಾದ ಮಹರ್ಷಿಗಳಿಂದ ಅವರವರ ಹೆಸರಿನ ಹದಿನೆಂಟು ಸ್ಮೃತಿಗಳೂ, ತರುವಾಯ ಹದಿನೆಂಟು ಉಪಸ್ಮೃತಿಗಳೂ ಹುಟ್ಟಿದುವು. ಇವೆಲ್ಲಾ ಛಂದೋರೂಪದಲ್ಲಿಯೇ ಇರುವುವು. ಇವುಗಳಲ್ಲಿ ಅನುಷ್ಟುಪ್ ವೃತ್ತವೇ ವಿಶೇಷವಾಗಿ ಉಳಿದ ಲೌಕಿಕ ಸಮವೃತ್ತಗಳಲ್ಲಿ ಕೆಲಕೆಲವು ತಲೆದೋರಿರುವುವು. ಈ ಸ್ಮೃತಿಗಳು ಲೋಕವ್ಯವಹಾರದಲ್ಲಿರುವ ಭಾಷೆಯಲ್ಲಿ ಬರೆಯಲ್ಪಟ್ಟಿರುವುವು

---

(1) ಸುದೇವಃ ಸಮಹಾಸತಿ — ಸುವೀರೋ ನರೋ ಮರುತಸ್ಸಮರ್ತ್ಯಃ — ಯಂತ್ರಾಯಧ್ವೈಸ್ಯಾಮತೇ (ಋ. ೪, ಅಷ್ಟ ೩, ಅ. ೫), ಪ್ರೇಷ್ಠಂವೋ ಅತಿಥಿಂ — ಸ್ತುಷೇ ಮಿತ್ರಮಿವಪ್ರಿಯಂ — ಅಗ್ನೇರಥಂ ನ ವೇದ್ಯಂ (ಸಾಮ ೧೮ ೧ಶಾ ೧ಪ್ರ ೧೮ರ್ಧ ೧ದ ೫ ಋ). (2) ಪ್ರಾಕೃತ ಕಾವ್ಯಗಳಲ್ಲೂ ಗದ್ಯಕಾವ್ಯಗಳಲ್ಲೂ, ನಾಟಕಾದಿಗಳಲ್ಲೂ ಆರ್ಯಾದಿ ಮಾತ್ರಾವೃತ್ತಗಳು ವಿಶೇಷವಾಗಿವೆ, ಕನ್ನಡ ಕಾವ್ಯಗಳಲ್ಲಾದರೋ ಕಂದವೇ ಎಲ್ಲಾ ವೃತ್ತಗಳಿಗಿಂತಲೂ ಹೆಚ್ಚಾಗಿವೆ.

ಬಳಿಕ ತ್ರೇತಾಯುಗದಲ್ಲಿ ವೇದಾರ್ಥಗಳ ಉಪಬೃಂಹಣವು ಎಂದರೆ ಪರಿಪೋಷವು, ಅತ್ಯಾವಶಕವಾಗಿ ಬಂದುದರಿಂದ "ಇತಿಹಾಸಪುರಾಣಾಭ್ಯಾಂ ವೇದಂ ಸಮುಪಬೃಂಹಯೇತ್" ಎಂಬ ಅಭಿಯುಕ್ತೋಕ್ತಿಯಂತೆ ಮೊದಲು ಇತಿಹಾಸವು ಹುಟ್ಟಿತು. ಇತಿಹಾಸಗಳಲ್ಲಿ, ವಾಲ್ಮೀಕಿಮಹರ್ಷಿಗಳಿಂದ ರಚಿತವಾದ ಶ್ರೀಮದ್ರಾಮಾಯಣವೇ ಮೊತ್ತಮೊದಲನೆಯದು (ದ್ವಾಪರಯುಗದ ಅಂತ್ಯದಲ್ಲಿ ಹುಟ್ಟಿದ ಮಹಾಭಾರತವು ೨ನೆಯದು). ಇದರಲ್ಲಿ ವೇದಾರ್ಥಗಳು ಲೌಕಿಕೋದಾಹರಣದಿಂದ ಸಮರ್ಥಿತವಾಗಿ ವರ್ಣಿಸಲ್ಪಟ್ಟಿರುವುದು. ಇದು ಹುಟ್ಟುವುದಕ್ಕೆ ಮೊದಲು ಲೋಕದಲ್ಲಿ ಎಂದರೆ ಲೌಕಿಕವಾದ ವ್ಯಾವಹಾರಿಕ ಭಾಷೆಯಲ್ಲಿ ಛಂದಸ್ಸೇ ಇರಲಿಲ್ಲ. ಆ ವಾಲ್ಮೀಕಿ ರಾಮಾಯಣದ ಆದ್ಯ ಶ್ಲೋಕವಾದ—

[1]ಮಾನಿಷಾದ ಪ್ರತಿಷ್ಠಾಂ ತ್ವಮಗಮಶ್ಶಾಶ್ವತೀಸ್ಸಮಾಃ |
ಯತ್ಕ್ರೌಂಚಮಿಥುನಾದೇಕಮವಧೀಃ ಕಾಮಮೋಹಿತಂ ||

ಎಂಬ ಅನುಷ್ಟುಪ್ ಪದ್ಯವೇ ಲೋಕದಲ್ಲಿ ತಲೆದೋರಿದ ಮೊದಲನೆಯ ಛಂದೋಬದ್ಧವಾದ ಪದ್ಯವಾಗಿರುವುದು. ಈ ವಾಲ್ಮೀಕಿ ರಾಮಾಯಣದಲ್ಲೂ ಅನುಷ್ಟುಪ್ ಶ್ಲೋಕಗಳೇ ಮುಖ್ಯವಾಗಿವೆ ಸರ್ಗಾಂತ್ಯಗಳಲ್ಲೂ ಮತ್ತೆ ಕೆಲವು ಪೂರ್ಣವಾದ ಸರ್ಗಗಳಲ್ಲೂ ಬೇರೆ ಬೇರೆ ಕೆಲವು ಸಮವೃತ್ತಗಳು ಸೇರಿರುವುವು.

ಬಳಿಕ ದ್ವಾಪರಯುಗದ ಅಂತ್ಯದಲ್ಲಿ ಅವತರಿಸಿದ[2] ವಿಷ್ಣ್ವಂಶಸಂಭೂತರಾದ ವೇದವ್ಯಾಸಮಹರ್ಷಿಗಳಿಂದ ಎರಡನೆಯ ಇತಿಹಾಸವಾದ ಭಾರತವೂ, ಭಾಗವತ ಮೊದಲಾದ [3]ಹದಿನೆಂಟು ಪುರಾಣಗಳೂ ರಚಿತವಾದುವು. ಈ ಮಹಾಭಾರತ ಮತ್ತು ಭಾಗವತಗಳಲ್ಲಿ ಛಂದೋರೂಪವಾದ ವಾಕ್ಯಗಳಲ್ಲದೆ, ಕೆಲವು ಗದ್ಯಗಳೂ ಇರುವುವು. ಪ್ರಾಯಶಃ ಈ ಗದ್ಯಗಳು ವಿಷಮವೃತ್ತಗಳಾಗಿರಬಹುದೆಂದು ನಾವು ಊಹಿಸಬಹುದು.

ಹೀಗೆ ವೇದೇತರಗಳಾದ ಛಂದಸ್ಸು ಲೋಕದಲ್ಲಿ ಹುಟ್ಟಲು ಕಾರಣವನ್ನು ಪೂರ್ವಾಚಾರ್ಯರು ಹೀಗೆ ಹೇಳುವರು—

"ಮನುಷ್ಯನು ತನ್ನ ಜನ್ಮವನ್ನು ಸಾರ್ಥಕಗೊಳಿಸಲು ಸಂಪಾದಿಸಬೇಕಾಗಿರುವ ಧರ್ಮಾರ್ಥ – ಕಾಮ – ಮೋಕ್ಷಗಳೆಂಬ ಚತುರ್ವಿಧಪುರುಷಾರ್ಥಗಳ ಸ್ವರೂಪ,

---

(1) ಈ ಶ್ಲೋಕವು ವಾಲ್ಮೀಕಿ ಮಹರ್ಷಿಗಳಿಂದ ಹೇಗೆ ರಚಿಸಲ್ಪಟ್ಟಿತೆಂಬ ವಿಷಯವು ವಿವರವಾಗಿ ಆ ಗ್ರಂಥದ ಆದಿಯಲ್ಲಿ ೨–೩ ಸರ್ಗಗಳಲ್ಲಿ ಹೇಳಿವೆ, (2) ವ್ಯಾಸಾಯ ವಿಷ್ಣುರೂಪಾಯ—ವ್ಯಾಸರೂಪಾಯ ವಿಷ್ಣವೇ (ವಿಷ್ಣು ಸಹಸ್ರನಾಮ), (3) ಈ ೧೮ ಪುರಾಣಗಳಲ್ಲಿ ಸೇರಿದ ವಿಷ್ಣು ಪುರಾಣವು ವೇದವ್ಯಾಸ ಮಹರ್ಷಿಗಳ ತಂದೆಯಾದ ಪರಾಶರರಿಂದ ಹೇಳಲ್ಪಟ್ಟುದೆಂದು, ಆ ಪುರಾಣದಲ್ಲೇ ಹೇಳಿದೆ, ತಂದೆಗೂ ಮಗನಿಗೂ ಅಭೇದವಿರುವುದರಿಂದ (ಆತ್ಮಾವೈ ಪುತ್ರನಾಮಾಸಿ), ಅದೂ ವ್ಯಾಸಕೃತವೆಂದೇ ಔಪಚಾರಿಕವಾಗಿರುವುದು.

ಪ್ರಾಪ್ತಿ, ಪ್ರಾಪ್ತಿಸಾಧನಗಳು ಇವನ್ನು ವೇದಗಳು ತಿಳಿಸಿಕೊಡುವುವು. "ವಿದಜ್ಞಾನೇ" ಎಂಬ ಧಾತುವಿನಿಂದ ಹುಟ್ಟಿರುವ ವೇದಶಬ್ದವು ಜ್ಞಾನವನ್ನುಂಟುಮಾಡುವುದು ಎಂಬ ಅನ್ವರ್ಥವಾದ ಹೆಸರನ್ನು ಪಡೆದಿರುವುದು ಈ ವೇದಗಳೂ, ಸ್ಮೃತಿಗಳೂ ಪುರುಷನಿಗೆ ಕರ್ತವ್ಯಾಂಶಗಳನ್ನು ರಾಜನಂತೆ ವಿಧಿನಿಷೇಧಪೂರ್ವಕವಾಗಿ ಹೇಳುವುವೇ ಹೊರತು ಸಹೇತುಕವಾಗಿ ಉಪಪಾದಿಸುತ್ತಿಲ್ಲ. ಆ ವೇದದಲ್ಲಿ ವಿಹಿತವೆಂದು ಹೇಳಿರುವ ಕರ್ತವ್ಯಾಂಶವನ್ನು ನಾವು ಏತಕ್ಕಾಗಿ ಅನುಷ್ಠಿಸಬೇಕು? ನಿಷಿದ್ಧವೆಂದು ಹೇಳಿರುವುದನ್ನು ನಾವು ಏತಕ್ಕೆ ಬಿಡಬೇಕು? ಎಂದು ಆಕ್ಷೇಪಿಸಲು ಅವಕಾಶವಿಲ್ಲ. ಆದಕ್ಕಾಗಿ ಈ ಆಕ್ಷೇಪಾಂಶವನ್ನು ಸಮಾಧಾನಗೊಳಿಸಲು ಬೇರೊಂದು ಕ್ರಮವು ಕಾಲಕ್ರಮದಲ್ಲಿ ಆವಶ್ಯಕವಾಯಿತು. ಆದುದರಿಂದ ಸುಹೃತ್ಸಮ್ಮಿತಗಳಾದ ಇತಿಹಾಸಪುರಾಣಗಳನ್ನು ಋಷಿಗಳು ರಚಿಸಬೇಕಾಗಿ ಬಂದಿತು. ಈ ಪುರಾಣಗಳು ಕರ್ತವ್ಯಾಂಶವನ್ನು ಸ್ನೇಹಿತನಂತೆ ಬೋಧಿಸವುವು. ಶ್ರೀಮದ್ರಾಮಯಣವು ರಾಮಚಂದ್ರನ ಮತ್ತು ರಾವಣನ ನಡತೆಗಳನ್ನು ವಿವರಿಸಿ, ರಾಮನಂತೆ ವರ್ತಿಸಿ ಯಶಸ್ಸನ್ನು ಪಡೆಯಬೇಕು – ರಾವಣಾದಿಗಳಂತೆ ವರ್ತಿಸಿ ನಾಶವಾಗಬಾರದು" ಎಂದು ಪರ್ಯಾಯದಿಂದ ಬೋಧಿಸುವುದು.

ಬಳಿಕ ಅಧರ್ಮವೇ ಹೆಚ್ಚುತ್ತಾ ಬಂದ ಕಲಿಯುಗದಲ್ಲಿ ಇತಿಹಾಸ ಪುರಾಣಗಳ ಕ್ರಮಕ್ಕಿಂತ ಬೇರೊಂದು ಕ್ರಮವು ಆವಶ್ಯಕವಾಯಿತು ಆದಕ್ಕಾಗಿ ಈ ಕಾಲದಲ್ಲಿ ಕಾಂತಾಸಮ್ಮಿತವಾದ ಹಲವು ಕಾವ್ಯಗಳು ಹುಟ್ಟಿದುವು.[1] ಮಹಾಕವಿಗಳು (ಭಾಸಸೌಮಿಲ್ಲಕ ಕವಿಪುತ್ರ, ಕಾಳಿದಾಸ ಬಾಣ ಮಾಘ ಭಾರವಿ ಮಯೂರಾದಿಗಳು) ಪುರಾಣೇತಿಹಾಸಗಳ ಕಥಾಭಾಗವನ್ನು ಕಾವ್ಯರೂಪದಲ್ಲಿ ರಚಿಸಿದರು. ಈ ಕಾವ್ಯಗಳಲ್ಲಿ ರಸವೇ ಪ್ರಧಾನವು, ರಸವು ವ್ಯಂಜನಾವೃತ್ತಿಯಿಂದ ತೋರುವುದು ಆದುದರಿಂದಲೇ ಶಬ್ದಪ್ರಧಾನಗಳಾದ ವೇದಗಳು, ಅರ್ಥಪ್ರಧಾನವಾದ ಇತಿಹಾಸಪುರಾಣಗಳು ಇವುಗಳಿಗಿಂತಲೂ ಈಕಾವ್ಯಗಳು ಶಬ್ದಾರ್ಥಗಳನ್ನು ಅಧೀನಮಾಡಿಕೊಂಡಿರುವ ವ್ಯಂಗ್ಯಾರ್ಥದ ಮೂಲಕ ಕರ್ತವ್ಯಾಂಶವನ್ನು ಬೋಧಿಸುವುವು. ಕಾಂತೆಯೂ ಕೂಡ ತನಗೆ ಬೇಕಾದ ವಿಷಯುಗಳನ್ನು ಕಾಂತನ ಸಂಗಡ ಸ್ಪಷ್ಟವಾಗಿ ಹೇಳದೆ, ಹಾವಭಾವಾದಿಗಳ ಮೂಲಕ ವ್ಯಂಗ್ಯ ಮರ್ಯಾದೆಯಿಂದ ತಿಳಿಸಿ, ತನ್ನ ಮನೋರಥವನ್ನು ನೆರವೇರಿಸಿಕೊಳ್ಳುವಂತೆ ಕಾವ್ಯಗಳೂ ಕೂಡ ವ್ಯಂಗ್ಯ ಮರ್ಯಾದೆಯಿಂದ ಕರ್ತವ್ಯಾಂಶವನ್ನು ಪುರುಷನಿಗೆ ತಿಳಿಸಿ ತನ್ನ ಇಷ್ಟಾರ್ಥವನ್ನು (ಪುರುಷನನ್ನು ಸನ್ಮಾರ್ಗ ಪ್ರವರ್ತಕನನ್ನಾಗಿ ಮಾಡುವಿಕೆ) ಪೂರ್ಣಗೊಳಿಸುವುವು.

---

(1) ಸಂಸ್ಕೃತದಲ್ಲಿ ಕಾಳಿದಾಸಕೃತ ರಘುವಂಶ, ಕುಮಾರಸಂಭವ, ಮೇಘದೂತ, ಈ ಕಾವ್ಯಗಳೂ ಭಾರವಿಕೃತ ಕಿರಾತಾರ್ಜುನೀಯ, ಮಾಘಕೃತ ಶಿಶುಪಾಲವಧ, ಶ್ರೀಹರ್ಷಕೃತನೈಷಧ ಇವೂ ಬಹು ಮುಖ್ಯವಾದ ಕಾವ್ಯಗಳು.

ಹೀಗೆ ವೇದಗಳು, ಸ್ಮೃತಿಗಳು, ಇತಿಹಾಸ ಪುರಾಣಗಳು ಇವೆಲ್ಲವೂ ಛಂದೋಬದ್ಧವಾದುವುಗಳೇ. ಇವುಗಳಿಗಿಂತ ಈಚೆಗೆ ಹುಟ್ಟಿದ ಕಾವ್ಯಗಳಲ್ಲಿ ಮಾತ್ರ ಪದ್ಯಕಾವ್ಯಗಳೆಂದೂ, [1]ಗದ್ಯಕಾವ್ಯಗಳೆಂದೂ, ಚಂಪೂ(ಮಿಶ್ರ)ಕಾವ್ಯಗಳೆಂದೂ ಮೂರು ವಿಧವಾಗಿರುವುವು. ಪದ್ಯಕಾವ್ಯವೆಲ್ಲವೂ ಛಂದೋಮಯಗಳು, ಗದ್ಯ (ವಚನ) ಕಾವ್ಯಗಳಾದರೋ ಸಂಸ್ಕೃತಭಾಷಾಪ್ರಪಂಚದಲ್ಲೇ ಎಣ್ಣಿಬಿಡಂತೆ ನಾಲ್ಕೈದು ಮಾತ್ರ ಇವೆ. ಇವುಗಳಲ್ಲೂ ಆದಿ ಮಧ್ಯಾವಸಾನಗಳಲ್ಲಿ ಛಂದೋಬದ್ಧವಾದ ಶ್ಲೋಕಗಳುಂಟು. [2]ಚಂಪೂ ಕಾವ್ಯಗಳಲ್ಲಿ ಛಂದಸ್ಸು ಗದ್ಯ (ವಚನ) ಎರಡೂ ಮಿಶ್ರವಾಗಿರುವುವು. ಹೀಗೆ ಶ್ರವ್ಯಕಾವ್ಯಗಳಾದ ಬಳಿಕ, ಬೋಧಿಸತಕ್ಕ ಕರ್ತವ್ಯಾಂಶವನ್ನು ಮನಮುಟ್ಟಿ ಪಂಡಿತಪಾಮರ ರಂಜನೆಯಾಗುವಂತೆ ನಿರೂಪಿಸುವ ಶಾಕುನ್ತಲ ಮೊದಲಾದ ದೃಶ್ಯ (ರೂಪಕ) ಕಾವ್ಯಗಳು ಹುಟ್ಟಿದುವು ಇವುಗಳಲ್ಲಿ ಸ್ತ್ರೀಯರು ಮೊದಲಾದವರಿಗೆ ತಕ್ಕುದೆಂದು ಹೇಳಿರುವ ಪ್ರಾಕೃತ ಭಾಷೆಯೂ ಸೇರಿರುವುದರಿಂದ ಪ್ರಾಕೃತ ಭಾಷೆಗಳಲ್ಲಿ ವ್ಯವಹರಿಸಲ್ಪಡುವ ಆರ್ಯಾದಿ ಮಾತ್ರಾವೃತ್ತಗಳೂ ಈ ರೂಪಕಗಳಲ್ಲಿ ಸೇರಲವಕಾಶವಾಯಿತು ಹೀಗೆ ಛಂದಸ್ಸು ಆರಂಭದಲ್ಲಿ ವೇದದಲ್ಲಿ ಮಾತ್ರ ಇದ್ದು ಕ್ರಮ ಕ್ರಮವಾಗಿ ಲೋಕದಲ್ಲಿಯೂ ಹಲವುಬಗೆಯಲ್ಲಿ ಹರಡಿಕೊಂಡು ವಿಶೇಷವಾಗಿ ಬೆಳೆಯುತ್ತಾ ಬಂದಿತು.

## ಛಂದಶ್ಶಾಸ್ತ್ರ

ವೇದಾರ್ಥವನ್ನು ತಿಳಿಯಲು ಛಂದಸ್ಸಿನ ಜ್ಞಾನವು ಅತ್ಯಾವಶ್ಯಕವೆಂದು ತಿಳಿದು ಬರುವುದು ವೇದದಲ್ಲಿ "ಅನುಷ್ಟುಭಾ ಯಜತಿ" "ಬೃಹತ್ಯಾ ಗಾಯತಿ" "ಗಾಯತ್ರ್ಯಾ ಸ್ತೌತಿ" ಎಂದು ಹೇಳಿರುವುದರಿಂದ ಈ ವಾಕ್ಯಾರ್ಥಜ್ಞಾನವಾಗಲು ಅನುಷ್ಟುಭಾದಿ ಶಬಗಳ ಅರ್ಥವಾಗಬೇಕು. ಇವೆಲ್ಲಾ ಛಂದಸ್ಸುಗಳು, ಆದುದರಿಂದ ಇವುಗಳ ಸ್ವರೂಪವನ್ನು ಬೋಧಿಸುವ ಛಂದಶ್ಶಾಸ್ತ್ರವು ಅತ್ಯಾವಶ್ಯಕವಾಯಿತು. ಇಷ್ಟೇ ಅಲ್ಲ, ವೇದಾಧ್ಯಯನಮಾಡುವವನಿಗೆ ಛಂದೋಜ್ಞಾನವಿಲ್ಲದಿದ್ದರೆ ಪ್ರತ್ಯವಾಯವ(ಕೇಡ)ನ್ನೂ ಅದೇ ವೇದವು ಹೇಳುವುದು. " ಯೋ ಹ ವಾ ಅವಿದಿತಾರ್ಷೇಯಚ್ಛಂದೋದೈವತವಿನಿಯೋಗೇನ ಬ್ರಾಹ್ಮಣೇನ ಮಂತ್ರೇಣ ವಾ ಯಜತಿ –ವಾ ಧ್ಯಾಪಯತಿ ವಾ—ಸ ಸ್ಥಾಣುಂ ವರ್ಛತಿ–ಗರ್ತಂ ವಾ ಪದ್ಯತೇ—ಪ್ರಮೀಯತೇ ವಾ–ಪಾಪೀಯಾ ಭವತಿ–ಯಾತಯಾಮಾನ್ಯಸ್ಯ ಛಂದಾಂಸಿ"—"(ಋಷಿಗಳು ಸಂಬಂಧ, ಛಂದಸ್ಸು, ದೈವತ, ವಿನಿಯೋಗ–ಇವನ್ನು ತಿಳಿಯದವನು ವೃಕ್ಷಾದಿ ಯೋನಿಗಳಲ್ಲಿ ಹುಟ್ಟುವನು. ಅಥವಾ ನರಕಕ್ಕೆ ಹೋಗುವನು.

---

(1) ಬಾಣಕೃತ ಕಾದಂಬರಿ, ಹರ್ಷಚರಿತ, ಸುಬಂಧುಕೃತ ವಾಸವದತ್ತಾ, ದಂಡಿಕೃತ ದಶಕುಮಾರಚರಿತ, ಅರ್ವಾಚೀನವಾಗಿ ಜೈನರಲ್ಲಿ – ಗದ್ಯಚಿನ್ತಾಮಣಿ, (2) ರಾಮಾಯಣಚಂಪು–ಭಾರತಚಂಪು ಮೊದಲಾದುವು

ಅಥವಾ ಪಾಪಿಯಾಗುವನು. ಅಥವಾ ಅರ್ಧಾಯುಸ್ಸಿನಲ್ಲಿ ಸಾಯುವನು. ಎಂದು) ಪ್ರತ್ಯವಾಯವು ಉಕ್ತವಾಗಿರುವುದು ಹೀಗೆ ವೇದಗಳ ಛಂದಸ್ಸ್ವರೂಪವನ್ನು ತಿಳಿಸುವ ಛಂದಶ್ಶಾಸ್ತ್ರವು—[1]ವೇದಾಂಗವೆಂದು ಪ್ರಸಿದ್ಧವಾಗಿದೆ. ವೇದಾಂಗವಾದ ಛಂದಶ್ಶಾಸ್ತ್ರವು ವೇದದಂತೆಯೇ ಕರ್ತೃರಹಿತವಾಗಿದ್ದರೂ ಅನಾದಿಯಾಗಿದ್ದ ಇದನ್ನು ತಪಶ್ಶಕ್ತಿಯಿಂದ ತಿಳಿದುಕೊಂಡು ಋಷಿಗಳು ಲೋಕದಲ್ಲಿ ಹರಡಿದರೆಂದು ಪೂರ್ವಾಚಾರ್ಯರು ಹೇಳಿರುವುದರಿಂದ ಈ ಛಂದಶ್ಶಾಸ್ತ್ರಕ್ಕೂ ಕರ್ತೃಗಳುಂಟೆಂದು ವ್ಯವಹಾರವು ಬಂದಿರುವುದು. ಈ ಬಗೆಯಲ್ಲಿ [2]ವೇದಾಂಗಛಂದಶ್ಶಾಸ್ತ್ರಪ್ರವರ್ತಕರಲ್ಲಿ ಮಹೇಶ್ವರನು ಮೊತ್ತಮೊದಲನೆಯವನು, ಬಳಿಕ ಬ್ರಹ್ಮ – ಇಂದ್ರ – ಗುರು – ಯಾಸ್ಕಮಹರ್ಷಿಯು ಈ ಮೊದಲಾದ ಕ್ರಮವನ್ನು ಈ ಶ್ಲೋಕವು ಹೇಳುವುದು. (ಯಾದವ ಪ್ರಕಾಶರ ಛಂದಶ್ಶಾಸ್ತ್ರ ಟೀಕೆಯಲ್ಲಿ)—

ಛಂದೋಜ್ಞಾನಮಿದಂ ಭವಾದ್ಭಗವತೋ ಲೇಭೇ ಸುರಾಣಾಂ ಪತಿಃ |
ತಸ್ಮಾದ್ದುಶ್ಚ್ಯವನಃ ತತಸ್ಸುರಗುರುರ್ಮಾಂಡವ್ಯನಾಮಾ ತತಃ ||
ಮಾಂಡವ್ಯಾದಪಿ ಸೈತವಃ ತತ ಋಷಿರ್ಯಾಸ್ಕಃ ತತಃ ಪಿಂಗಲಃ |
ತಸ್ಯೇದಂ ಯಶಸಾ ಗುರೋರ್ಭುವಿ ಧೃತಂ ಪ್ರಾಪ್ಯಾಸ್ಮದಾದ್ಯೈಃಕ್ರಮಾತ್ ||

ಈ ಛಂದೋಜ್ಞಾನವನ್ನು ಪೂಜ್ಯನಾದ ಮಹೇಶ್ವರನಿಂದ ಸುರಪತಿಯೂ (ಬ್ರಹ್ಮನೆಂದು ಹೇಳಬೇಕು) ಅವನಿಂದ ಇಂದ್ರನೂ (ದುಶ್ಚ್ಯವನನು) ಅವನಿಂದ ಸುರಗುರುವೂ. ಅವನಿಂದ ಮಾಂಡವ್ಯನೂ, ಅವನಿಂದ ಸೈತವನೂ ಅವನಿಂದ ಯಾಸ್ಕಮುನಿಯೂ, ಅವನಿಂದ ಪಿಂಗಲನೂ ಪಡೆದರು. ಪಿಂಗಲನಿಂದ ನಮ್ಮಂಥವರು ಪಡೆದರೆಂದು ಯಾದವ ಪ್ರಕಾಶರು ಹೇಳಿರುವರು. (ಇವರು ಪ್ರಾಯಶಃ ಕ್ರಿ. ೧೨೦೦ರಲ್ಲಿದ್ದಿರಬಹುದು)

ಇವರಲ್ಲಿ ಸುರಗುರುವಿನವರೆಗೂ ಎಲ್ಲರೂ ಉಪದೇಶಕರಲ್ಲದೆ ಗ್ರಂಥಕರ್ತೃಗಳಲ್ಲ. ಮಾಂಡವ್ಯ ಸೈತವ ಯಾಸ್ಕರು ಗ್ರಂಥಕರ್ತೃಗಳಾಗಿರಬಹುದು. ಈಗ ನಮಗೆ ದೊರಕಿ

---

(1) ವೇದಗಳು ಅನಾದಿಯಾಗಿಯೂ, ಕರ್ತೃರಹಿತವಾಗಿಯೂ ಇರುವುದಾದರೂ, ಋಷಿಗಳಿಂದ ಹೇಳಲ್ಪಟ್ಟುವುವೆಂದು ಹೇಳುವುದು ಔಪಚಾರಿಕವು, ಯುಗಾನ್ತೇಽನ್ತರ್ಹಿತಾನ್ ವೇದಾನ್ ಸೇತಿಹಾಸಾನ್ ಮಹರ್ಷಯಃ । ಲೇಭಿರೇ ತಪಸಾ ಪೂರ್ವಂ ಅನುಜ್ಞಾತಾಃ ಸ್ವಯಂಭುವಾ ॥ ಹಾಗೆಯೇ ವೇದಾಂಗಗಳೂ ಋಷಿಪ್ರೋಕ್ತಗಳೆಂಬುದು ಔಪಚಾರಿಕವು, (2) ಶಿಕ್ಷಾ ವ್ಯಾಕರಣಂ ಛಂದೋ ನಿರುಕ್ತಂ ಜ್ಯೋತಿಷಂ ತಥಾ ಕಲ್ಪಶ್ಚೇತಿ ಷಡಂಗಾನಿ ವೇದಸ್ಯ (ಛಂದಸ್ಸಿನಂತೆಯೇ ವ್ಯಾಕರಣಾದಿಗಳೂ ವೇದಾಂಗಗಳು) ಛಂದಃ ಪಾದೌತು ವೇದಸ್ಯ ಹಸ್ತಃ ಕಲ್ಪೋಥ ಪಠ್ಯತೇ । ಜ್ಯೋತಿಷಾಮಯನಂ ಚಕ್ಷುಃ ನಿರುಕ್ತಂ ಶ್ರೋತ್ರಮುಚ್ಯತೇ ॥ ಶಿಕ್ಷಾ ಘ್ರಾಣಂತು ವೇದಸ್ಯ ಮುಖಂ ವ್ಯಾಕರಣಂ ಸ್ಮೃತಂ ॥ (ಶಿಕ್ಷಾಯಾಂ).

ರುವ ಛಂದಶ್ಶಾಸ್ತ್ರಕರ್ತೃಗಳಲ್ಲಿ ಪಿಂಗಳನೇ ಮೊತ್ತಮೊದಲನೆಯವನು. ಅವನಿಂದ ಛಂದಶ್ಶಾಸ್ತ್ರವು ಸೂತ್ರರೂಪದಲ್ಲಿ ೮ ಅಧ್ಯಾಯಗಳಲ್ಲಿ ರಚಿತವಾಗಿದೆ. ಇವನು ತನಗೆ ಹಿಂದೆ ಕಾಶ್ಯಪ ಸೈತವರಿದ್ದರೆಂದು, ಅವರ ಹೆಸರನ್ನು ಹೇಳಿರುವನು ಯಾಸ್ಕನ ಹೆಸರನ್ನು ಹೇಳದಿರಲು ಕಾರಣವು ತಿಳಿಯುವುದಿಲ್ಲ. ಆದರೆ ಕಾಶ್ಯಪ ಸೈತವರನ್ನು ಲೌಕಿಕವೃತ್ತವಿವರಣ ಪ್ರಕರಣದಲ್ಲಿ ಹೇಳಿರುವುದರಿಂದ ಯಾಸ್ಕನು ಪ್ರಾಯಶಃ ವೈದಿಕ ಛಂದಸ್ಸನ್ನು ಮಾತ್ರ ಬರೆದಿರಬಹುದೆಂದೂ, ಇದಕ್ಕಾಗಿ ಅವನನ್ನು ಲೌಕಿಕ ಛಂದೋವಿವರಣ ಪ್ರಕರಣದಲ್ಲಿ ಸ್ಮರಿಸಿಲ್ಲವೆಂದೂ ಊಹಿಸಬಹುದು. ಒಟ್ಟಿನಲ್ಲಿ ಈ ಮೂವರು ಮಾಡಿರುವ ಶಾಸ್ತ್ರಗ್ರಂಥಗಳು ಇದುವರೆಗೂ ದೊರಕಿಲ್ಲ. ಪೂರ್ಣಗ್ರಂಥವಿರಲಿ, ಅವರ ಏಕದೇಶವಾದರೂ ದೊರಕಬಹುದಾಗಿತ್ತು. ಅದೂ ಇಲ್ಲವಾಗಿದೆ

ಪಿಂಗಳನಿಂದ ಈಚೆಗೆ ಹಲವರು ಲೌಕಿಕ ಛಂದಶ್ಶಾಸ್ತ್ರ ಕರ್ತೃಗಳು ಇದ್ದರೆಂಬುದು ಕೆಲವು ಛಂದೋಗ್ರಂಥಗಳಿಂದ ತಿಳಿವಿಗೆ ಬರುವುದು ಅವರಲ್ಲಿ ಹಲವರ ಗ್ರಂಥಗಳೂ, ಅವರ ದೇಶಕಾಲಾದಿಗಳೂ ತಿಳಿಯುವುದಿಲ್ಲ—ವೃತ್ತಿ ಜಾತಿಸಮುಚ್ಚಯದಲ್ಲಿ (ವಿರಹಾಂಕ ವಿರಚಿತ. ಸು. ೧೦ ನೆಯ ಶತಮಾನ) ಪಿಂಗಳನನ್ನೂ (I. VI)[1] (ಭುಜಗಾಧಿಪ), ವಾಸುಕಿಮಾಂಡವ್ಯರೆಂಬ ಛಂದಸ್ಕರ (VI) ರನ್ನೂ ಹೇಳಿರುವನು. ಅಲ್ಲದೆ ವಸಂತತಿಲಕಾ ವೃತ್ತದ ಹೆಸರನ್ನು ಹೇಳುವಾಗ ಕಾಶ್ಯಪನ ಮತದಂತೆ ಸಿಂಹೋನ್ನತವೆಂದು ಹೇಳಿರುವನು, ಅಲ್ಲದೆ ಯತಿವಿಷಯವನ್ನು ಹೇಳುವಾಗ [2]ಜಯದೇವಪಿಂಗಳರು ಯತಿಯನ್ನೊಪ್ಪುವರು. ಮಾಂಡವ್ಯ ಭರತ ಕಾಶ್ಯಪ ಸೈತವರು ಮತ್ತು ಇತರರೂ ಯತಿಯನ್ನೊಪ್ಪುವುದಿಲ್ಲ. ಎಂದು ಹಲವರ ಹೆಸರನ್ನು ಹೇಳಿರುವನು. ಇವರ ಗ್ರಂಥಗಳ ಹೆಸರುಮಾತ್ರ ಉಕ್ತವಾಗಿಲ್ಲ.

ಪುರಾಣಗಳಲ್ಲಿ ಒಂದಾದ ಆಗ್ನೇಯ ಪುರಾಣದಲ್ಲಿಯೂ ಛಂದಶ್ಶಾಸ್ತ್ರ ವಿಚಾರವಿದೆ. ಅಲ್ಲಿಯ ಲಕ್ಷಣವೆಲ್ಲವೂ ಅನುಷ್ಟುಪ್ ಶ್ಲೋಕದಲ್ಲಿವೆ. ಇವುಗಳಲ್ಲಿ [3]ಪಿಂಗಳನ ಹೆಸರು ಇರುವುದರಿಂದ ಇದು ಪಿಂಗಳಶಾಸ್ತ್ರಕ್ಕಿಂತಲೂ ಅರ್ವಾಚೀನವೆಂದು ಹೇಳಬಹುದು.

ಈಗ ನಮಗೆ ದೊರಕಿರುವ ಸಂಸ್ಕೃತ ಛಂದೋ ಗ್ರಂಥಗಳಲ್ಲೆಲ್ಲಾ ಪಿಂಗಳಚ್ಛಂದಸ್ಸೂತ್ರವೇ ಪ್ರಾಚೀನವಾದುದು. ಇದರಲ್ಲಿ ವೈದಿಕ ಲೌಕಿಕ ಛಂದಸ್ಸುಗಳೆಲ್ಲವೂ ಸಾಕಾದಷ್ಟುಮಟ್ಟಿಗೆ ವಿವರಿಸಲ್ಪಟ್ಟಿದೆ. ಇದರಲ್ಲಿ ೮ ಅಧ್ಯಾಯಗಳಿವೆ, ಪ್ರಾಯಶಃ ಪಾಣಿನಿಕೃತವಾದ ವ್ಯಾಕರಣ ಸೂತ್ರಗಳನ್ನು ಆದರ್ಶವಾಗಿಟ್ಟುಕೊಂಡು ಈ ಗ್ರಂಥದಲ್ಲೂ

(1) ಪಿಂಗಳನು ಆದಿಶೇಷನ ಅವತಾರವೆಂದು ಪ್ರಸಿದ್ಧಿಯುಂಟು,(2) ಇವನನ್ನು ನಾಗವರ್ಮನು ೬ನೆಯ ಪ್ರಕರಣದಲ್ಲಿ ಸ್ಮರಿಸಿರುವನು. (3) ಪಿಂಗಳೋಕ್ತವಾದ ಛಂದಸ್ಸನ್ನೂ, ಗಣ ಸ್ವರೂಪವನ್ನೂ ಮೂಲಜಗಳಾದ ಅವುಗಳಿಂದಲೇ ಯಥಾಕ್ರಮವಾಗಿ ಹೇಳುವೆನು (ಅಗ್ನಿ—ಅ ೧, ಪ, ೧),

೮ ಅಧ್ಯಾಯಗಳನ್ನು ಪಿಂಗಳನು ಏರ್ಪಡಿಸಿರುವಂತೆ ತೋರುವುದು. ಈ ಪಿಂಗಳನನ್ನು ಕೇದಾರಭಟ್ಟನು (ವೃತ್ತರತ್ನಾಕರ ಕರ್ತೃವು) ನಾಗರಾಜ, ಪಿಂಗಳನಾಗ, ಮುನಿ, ಭುಜಂಗೇಶ ಎಂದು ಕರೆದಿರುವನು. ಇವರಲ್ಲಿ ಮೊದಲನೆ ಅಧ್ಯಾಯವು ಸಂಜ್ಞಾಧ್ಯಾಯವು, ಇದರಲ್ಲಿ ಗುರು-ಲಘುಗಳು, ಅಕ್ಷರಗಳಿಂದಾದ ಗಣಗಳು, ವಸು ಮೊದಲಾದ ಸಂಖ್ಯಾ ಸಂಜ್ಞಾಶಬ್ದಗಳು ಇವನ್ನು ಹೇಳಿದೆ ಎರಡನೆಯ ಅಧ್ಯಾಯದಲ್ಲಿ ಗಾಯತ್ರೀ (ಲೌಕಿಕದಲ್ಲಿ ೬ ಅಕ್ಷರದ ಛಂದಸ್ಸು) ಮೊದಲಾಗಿ ಜಗತೀವರೆಗೆ ಏಳು ಛಂದಸ್ಸುಗಳ ಸ್ವರೂಪವನ್ನು ವಿವರಿಸಿದೆ. ಇವಕ್ಕೆಲ್ಲಾ ಹಲಾಯುಧಕೃತವೃತ್ತಿಯಲ್ಲಿ ಉದಾಹರಣವನ್ನು ಕೊಟ್ಟಿದೆ. ನಾಲ್ಕನೆಯ ಅಧ್ಯಾಯದಲ್ಲಿ ಉತ್ಕೃತಿಯಿಂದ ನಾಲ್ಕುನಾಲ್ಕಕ್ಷರ ಕಡಿಮೆಯಾಗಿರುವ ಕೃತಿಯವರೆಗಣ ಏಳು ಛಂದಸ್ಸುಗಳೂ, ಬಳಿಕ ಧೃತಿಯಿಂದ ಆರಂಭಿಸಿ ಜಗತೀವರೆಗೆ ಏಳು ಛಂದಸ್ಸುಗಳೂ ವಿಲೋಮದಿಂದ ವಿವರಿಸಲ್ಪಟ್ಟಿವೆ, ಬಳಿಕ ಲೌಕಿಕ ಛಂದಸ್ಸನ್ನು ಆರಂಭಿಸಿ ಪ್ರತಿಷ್ಠೆಯಿಂದ ಉಕ್ತಿಯವರೆಗಣ ಐದು ಛಂದಸ್ಸುಗಳನ್ನು ವಿವರಿಸಿದೆ,ಬಳಿಕ ಮಾತ್ರಾಗಣಗಳಾದ ಆರ್ಯಾ ಮತ್ತು ಪಥ್ಯಾ ಮೊದಲಾದ ಆರ್ಯಾಭೇದಗಳೂ ಗೀತಿಗಳೂ (ಮಾತ್ರಾಗಣವೃತ್ತ) ವಿವೃತವಾಗಿವೆ (೮೦ ಭೇದಗಳು). ಬಳಿಕ ವೈತಾಲೀಯ ವೃತ್ತಗಳು, ಅದರ ಭೇದಗಳು (ಔಪಚ್ಛಂದಸಿಕಾದಿ) (ಮಾತ್ರಾವೃತ್ತ), ಮಾತ್ರಾಸಮಕ ವೃತ್ತಗಳೂ, ಗೀತ್ಯಾರ್ಯಾಭೇದಗಳೂ ವಿವರಿಸಲ್ಪಟ್ಟಿವೆ ಪಂಚಮಾಧ್ಯಾಯದಲ್ಲಿ ಸಮಾರ್ಧಸಮ ವಿಷಮವೃತ್ತಗಳನ್ನು ಹೇಳುವುದಾಗಿ ಪ್ರತಿಜ್ಞೆಮಾಡಿ ಮೊದಲು ಸಮಾನೀ ಮೊದಲಾದ ಅನುಷ್ಟುಭ್ವೃತ್ತ ಭೇದಗಳನ್ನು ಪದಚತುರೂರ್ಧ್ವ ವೃತ್ತದವರೆಗೂ ನಿರೂಪಿಸಿ, ಉದ್ಗತಾದಿ ವೃತ್ತಗಳನ್ನು ಶಿಖಾ ಖಂಜಾ ವೃತ್ತದವರೆಗೆ ಹೇಳಿ ಅಧ್ಯಾಯವನ್ನು ಸಮಾಪ್ತಿ ಮಾಡಿರುವನು. ಬಳಿಕ ಆರನೆಯ ಅಧ್ಯಾಯದ ಆದಿಯಲ್ಲಿ ಯತಿ ಸಂಜ್ಞೆಯನ್ನು ಅದರ ಸ್ಥಳಗಳನ್ನೂ ವಿವರಿಸಿದೆ. ಬಳಿಕ ೧ ಅಕ್ಷರ ಪಾದದಿಂದ ಆರಂಭಿಸಿ ೧೩ ಅಕ್ಷರದ ಪಾದದವರೆಗಣ ಸಮವೃತ್ತಗಳನ್ನು ನಿರೂಪಿಸಿರುವನು ಏಳನೆಯ ಅಧ್ಯಾಯದಲ್ಲಿ, ಅಲ್ಲಿಂದ ಮುಂದಣ ೧೪ ಛಂದಸ್ಸಿನ ಸಮವೃತ್ತಗಳನ್ನೂ, ದಂಡಕಗಳನ್ನೂ ವಿವರಿಸುವನು. ಎಂಟನೆಯ ಅಧ್ಯಾಯದಲ್ಲಿ ಇಲ್ಲಿ ಹೇಳದಿರುವ ವೃತ್ತಗಳೆಲ್ಲವೂ ಗಾಥೆಗಳೆಂದು ಕೆಲವನ್ನು ಹೇಳಿ ಬಳಿಕ ಪ್ರಸ್ತಾರ ಮೊದಲಾದ ಐದು ಪ್ರತ್ಯಯಗಳನ್ನು (ಅಧ್ವಯೋಗವನ್ನು ಹೇಳಿಲ್ಲ) ಹೇಳಿ ಗ್ರಂಥ ಸಮಾಪ್ತಿ ಮಾಡಿರುವನು.

ಈ ಪಿಂಗಳನೇ (ಪ್ರಾಕೃತಪಿಂಗಳವೆಂಬ) ಪ್ರಾಕೃತ ಛಂದಶ್ಶಾಸ್ತ್ರವೊಂದನ್ನೂ ಬರೆದಿರುವನು ಅದರಲ್ಲಿ ಮಾತ್ರಾವೃತ್ತಗಳಾದ ಹಲವು ದೇಶೀಯ ವೃತ್ತಭೇದಗಳನ್ನೂ, ಸಂಸ್ಕೃತಭಾಷಾ ಪ್ರಸಿದ್ಧಗಳಾದ ಸಮವೃತ್ತಾದಿಗಳನ್ನೂ ವಿವರಿಸಿರುವನು.

ಲೌಕಿಕಛಂದಸ್ಸನ್ನು ಮಾತ್ರವೇ ವಿವರಿಸುವ ಛಂದಶ್ಶಾಸ್ತ್ರಗಳಲ್ಲಿ ವೃತ್ತರತ್ನಾಕರವೇ ಮೊದಲನೆಯದೆಂದು ತೋರುವುದು, ಇದನ್ನು ಬರೆದವನು ಕೇದಾರಭಟ್ಟನು, ಪ್ರಾಯಶಃ

ಇದು ಸುಮಾರು ೧೩ನೆಯ ಶತಮಾನದಲ್ಲಿ ಹುಟ್ಟಿದುದೆಂದು ಊಹಿಸಿರುವರು. ಇದರಲ್ಲಿ ಅಕ್ಷರಗಣವೃತ್ತಗಳೂ, ಮಾತ್ರಾವೃತ್ತ ಮಾತ್ರಾಗಣವೃತ್ತಗಳೂ ವಿಶೇಷವಾಗಿ ವಿವರಿಸಲ್ಪಟ್ಟಿವೆ ಇವನೂ ತನ್ನ ಗ್ರಂಥದಲ್ಲಿ ಪಿಂಗಳ[1] ಸೈತವ ಕಾಶ್ಯಪರನ್ನು ಉದ್ಧರಿಸಿರುವನು. ಮತ್ತಾರನ್ನೂ ಹೇಳಿಲ್ಲ. ಈ ಗ್ರಂಥದಲ್ಲಿ ಐದು ಅಧ್ಯಾಯಗಳಿವೆ.

ಮೊದಲನೆಯ ಅಧ್ಯಾಯವು ಸಂಜ್ಞಾಪ್ರಕರಣ ಇದರಲ್ಲಿ ಮಂಗಳಾಚರಣ, ಗ್ರಂಥ ಕರ್ತೃವಿನ ಪರಿಚಯ, ಗ್ರಂಥಪರಿಮಾಣ, ಛಂದಶ್ಶಾಸ್ತ್ರಕ್ಕೆ ಮೂಲಾಧಾರಭೂತವಾದ ಗಣಗಳು (ಅಕ್ಷರ ವೃತ್ತ ಮಾತ್ರಾಗಣಗಳು) ಲಘುವು ಗುರುವಾಗುವ ಸಂಭವ, ಸಂಖ್ಯಾಸಂಜ್ಞೆಗಳು, ಯತಿ, ಪಾದ, ಸಮವೃತ್ತಾದಿ ಲಕ್ಷಣ, ಛಂದಸ್ಸಿನ ಹೆಸರು, ಇವುಗಳ ವಿಷಯವನ್ನು ಹೇಳಿದೆ

ಎರಡನೆಯ ಅಧ್ಯಾಯದಲ್ಲಿ ಆರ್ಯಾಪ್ರಭೃತಿಯಾದ ಮಾತ್ರಾಗಣವೃತ್ತಗಳು, ಮಾತ್ರಾವೃತ್ತಗಳು ಇವನ್ನು ಹೇಳಿದೆ ಆರ್ಯೆ, ಆರ್ಯಾಭೇದ, ಗೀತಿ, ವೈತಾಲೀಯ, ವಕ್ತ್ರ, ಮಾತ್ರಾಸಮಕ, ಪಾದಾಕುಲಕ, [2]ಮಾತ್ರಾವರ್ಣಜ್ಞಾನ, ಶಿಖಾ, ಖಂಜಾ, ಈ ವೃತ್ತಗಳ ವಿವರಣವಿದೆ.

ಮೂರನೆಯ ಅಧ್ಯಾಯದಲ್ಲಿ ಒಂದು ಅಕ್ಷರ ಪಾದ ಮೊದಲುಗೊಂಡು ೨೬ ಅಕ್ಷರದ ಪಾದದವರೆಗಣ ಸಮವೃತ್ತಗಳೂ. ೨೬ ಅಕ್ಷರಕ್ಕೆ ಹೆಚ್ಚಿನ ಅಕ್ಷರಗಳುಳ್ಳ ಪಾದಗಳಿಂದ ನಿಬದ್ಧವಾಗಿರುವ ದಂಡಕಗಳೂ ಹೇಳಲ್ಪಟ್ಟಿವೆ

ನಾಲ್ಕನೆಯ ಅಧ್ಯಾಯದಲ್ಲಿ ಅರ್ಧಸಮವೃತ್ತಗಳೂ, ಐದನೆಯ ಅಧ್ಯಾಯದಲ್ಲಿ ವಿಷಮವೃತ್ತಗಳೂ ಹೇಳಲ್ಪಟ್ಟಿವೆ ಪಿಂಗಳ ಮುನಿಯು ಅನುಷ್ಟುಪ್ ಪ್ರಕರಣದಲ್ಲಿ ಹೇಳಿರುವ ಪದಚತುರೂರ್ಧ್ವವೃತ್ತವನ್ನು ಈತನು ವಿಷಮವೃತ್ತಗಳ ಕೊನೆಯಲ್ಲಿ ಸಂಗ್ರಹಿಸಿ ಹೇಳಿರುವನು ಇದೇ ಪ್ರಕರಣದಲ್ಲಿ ವಿಷಮವೃತ್ತಾಂತರಗಳಾದ ಉದ್ಗತಾ ವೃತ್ತ, ಅದರ ಭೇದಗಳು, ಉಪಸ್ಥಿತಪ್ರಚುಪಿತ ಶುದ್ಧವಿರಾಟ್ ಎಂಬ ವೃತ್ತಗಳೂ, ಗಾಥೆಗಳೂ ಹೇಳಲ್ಪಟ್ಟಿವೆ

ಶ್ರುತಬೋಧ— ಕಾಳಿದಾಸ ಕೃತವೆಂದು ಪ್ರಸಿದ್ಧವಾದ "ಶ್ರುತಬೋಧ" ಎಂಬ ಗ್ರಂಥವೊಂದು ಸಂಸ್ಕೃತದಲ್ಲಿ ದೊರಕುವುದು ಇದರಲ್ಲಿ ೪೩ ಪದ್ಯಗಳಿವೆ ಇವುಗಳಲ್ಲಿ

(1) ಸಿಂಹೋನ್ನತೇಯಮುದಿತಾ ಮುನಿಕಾಶ್ಯಪೇನ। ಉದ್ಧರ್ಷಿಣೀಯಮುದಿತಾ ಮುನಿಸೈತವೇನ।

(2) ವೃತ್ತಸ್ಯ ಲಾವಿನಾವರ್ಣೈಃ ಗಾವರ್ಣಾ ಗುರುಭಿಸ್ತಥಾ। ಗುರವೋ ಲೈರ್ದಲೈರ್ನಿತ್ಯಂ ಪ್ರಮಾಣಮಿತಿನಿಶ್ಚಿತಂ (ಇದರ ಪರಿವರ್ತನ ಕಂದವು ನಾಗವರ್ಮ ಛಂದಸ್ಸಿನಲ್ಲಿದೆ).

ಮೊದಲು ಆರ್ಯಾ, ಗೀತಿ, ಉಪಗೀತಿ, ಈ ಜಾತಿಗಳ ಲಕ್ಷಣಗಳು ಹೇಳಿವೆ. ಬಳಿಕ ೫–೭ ಅಕ್ಷರಗಳ ಪಾದಗಳುಳ್ಳ ಸಮವೃತ್ತಗಳಿಂದ ಆರಂಭಿಸಿ ಸ್ರಗ್ಧರಾ (೨೧ ಅಕ್ಷರವೃತ್ತ) ವೃತ್ತದವರೆಗೂ ಕಾವ್ಯದಲ್ಲಿ ಬಂದಿರುವ ಪ್ರಸಿದ್ಧ ವೃತ್ತಗಳು ಹೇಳಲ್ಪಟ್ಟಿವೆ ಈ ಗ್ರಂಥದಲ್ಲಿ ಲಕ್ಷ್ಯ ಪದ್ಯಗಳೇ ಲಕ್ಷಣಗಳಾಗಿವೆ, ಮತ್ತು [1]ಮಾತ್ರೆಗಳು ಗುರು ಲಘುಗಳು ಇವುಗಳಿಂದಲೇ ಎಲ್ಲಾ ವೃತ್ತಗಳ ಲಕ್ಷಣವನ್ನೂ ಹೇಳಿರುವನು ಗಣಪ್ರಸ್ತಾವವನ್ನೇ ಎತ್ತಿಲ್ಲ ಇದೊಂದು ಈ ಗ್ರಂಥದ ವೈಶಿಷ್ಟ್ಯವು.

ಛಂದೋಮಂಜರಿ— ಛಂದೋಮಂಜರಿಯು [2]ಗಂಗಾದಾಸ ರಚಿತವಾದುದು ಇದರಲ್ಲಿ ಆರು ಸ್ತಬಕಗಳಿವೆ ಮೊದಲಿನ ಸ್ತಬಕದಲ್ಲಿ ಸಂಜ್ಞಾವಿವರಣವೂ, ಎರಡನೆಯದರಲ್ಲಿ ಸಮವೃತ್ತಗಳೂ, ದಂಡಕಗಳೂ ಹೇಳಲ್ಪಟ್ಟಿವೆ. ಮೂರನೆಯದರಲ್ಲಿ ಅರ್ಧಸಮವೃತ್ತಗಳೂ, ನಾಲ್ಕನೆಯದರಲ್ಲಿ ವಿಷಮವೃತ್ತಗಳೂ, ಐದನೆಯದರಲ್ಲಿ ಆರ್ಯಾವೃತ್ತಜಾತಿಗಳೂ ಹೇಳಿವೆ. ಆರ್ಯಾಗೀತಿ - ವೈತಾಳೀಯಗಳೂ, ಪಜ್ಝಟಿಕಾ, ದೋಹಡಿಕಾ ಎಂಬ ಪ್ರಾಕೃತವೃತ್ತಗಳು ಇದರಲ್ಲಿ ಸೇರಿವೆ. ಆರನೆಯದರಲ್ಲಿ ಗದ್ಯಪದ್ಯಗಳೆಂಬ ಎರಡು ಬಗೆಯ ಕಾವ್ಯಗಳನ್ನು ಹೇಳಿ, ವೃತ್ತಗಂಧಿಗಳಾದ ಕೆಲವು ಗದ್ಯಗಳನ್ನು ಹೇಳಿದೆ. ಕೊನೆಯಲ್ಲಿ ಗ್ರಂಥಕರ್ತೃವು ಪ್ರಸ್ತಾರಾದಿ ಷಟ್ಪ್ರತ್ಯಯಗಳು ಛಂದೋಜ್ಞಾನಕ್ಕೆ ಆವಶ್ಯಕವಿಲ್ಲವೆಂದು ಇಲ್ಲಿ ನಾನು ಹೇಳಿಲ್ಲವೆಂದು ಹೇಳಿ ಗ್ರಂಥವನ್ನು ಉಪಸಂಹರಿಸಿರುವನು.

ಮಾದರಿಗಾಗಿ ಮೇಲೆ ಮೂರು ಸಂಸ್ಕೃತ ಛಂದೋ ಗ್ರಂಥಗಳ ಸ್ವರೂಪವನ್ನು ಸಂಗ್ರಹವಾಗಿ ವಿಮರ್ಶಿಸಿದೆ. ಇನ್ನೂ ಸುವೃತ್ತತಿಲಕ, ವೃತ್ತಜಾತಿಸಮುಚ್ಚಯ, ಛಂದೋಮಂಜರಿ ಮೊದಲಾದ ಹಲವು ಛಂದೋ ಗ್ರಂಥಗಳು ಸಂಸ್ಕೃತದಲ್ಲಿ ರಚಿತವಾಗಿ ಪ್ರಚಾರದಲ್ಲಿವೆ.

## ಕನ್ನಡ ಛಂದಸ್ಸು

ಇನ್ನು ಕನ್ನಡಛಂದಸ್ಸನ್ನು ವಿಚಾರಮಾಡೋಣ! ಸಂಸ್ಕೃತ ಛಂದಶ್ಶಾಸ್ತ್ರದಲ್ಲಿವ್ಯವಹಾರದಲ್ಲಿರುವ ಛಂದಸ್ಸು, ಮಾತ್ರೆ, ಗುರು, ಲಘು, ಅಕ್ಷರಗಣ, ಮಾತ್ರಾಗಣ, ಯತಿ, ವೃತ್ತ

---

(1) ಯಾವ ವೃತ್ತದ ಮೊದಲನೆಯ ಮೂರನೆಯ ಪಾದಗಳಲ್ಲಿ, ೧೨ ಮಾತ್ರೆಗಳೂ ಎರಡನೆಯ ಪಾದದಲ್ಲಿ ಹದಿನೆಂಟು ಮಾತ್ರೆಗಳೂ, ನಾಲ್ಕನೆಯ ಪಾದದಲ್ಲಿ ಹದಿನೈದು ಮಾತ್ರೆಗಳೂ ಇರುವುವೋ ಅದು ಆರ್ಯಾವೃತ್ತವು. ಹನ್ನೊಂದಕ್ಷರದ ಶಾಲಿನೀ ವೃತ್ತದ ಲಕ್ಷಣವು ಹೀಗೆ ಹೇಳಿದೆ- ಆರನೆಯದು, ಒಂಭತ್ತನೆಯದು ಲಘುವಾಗಿರಬೇಕು, ೪—೭ರಲ್ಲಿ ಯತಿ ಇರಬೇಕು, ಈ ವೃತ್ತವು ಶಾಲಿನೀ ವೃತ್ತವು,
(2) ಈತನು ತನ್ನ ಗುರುವಾದಪುರುಷೋತ್ತಮನು ಛಂದೋಗೋವಿಂದವೆಂಬ ಛಂದಶ್ಶಾಸ್ತ್ರವೊಂದನ್ನು ಬರೆದಿರುವಂತೆ ಹೇಳಿರುವನು, (ಅಯಂಚಶ್ಲೋಕಃ ಛಂದೋಗೋವಿನ್ದೇ ಮಮಗುರೋಃ).

ಜಾತಿ ಎಂಬ ಸಂಜ್ಞೆಗಳನ್ನೇ [1]ಕನ್ನಡ ಛಂದಶ್ಶಾಸ್ತ್ರಜ್ಞರೂ ಸ್ವೀಕರಿಸಿರುವರು. ಕನ್ನಡ ಭಾಷೆಯಲ್ಲಿ । ಛಂದೋಬದ್ಧವಾದ ಪದ್ಯಗಳು ಸುಮಾರು ೬ ಶತಮಾನದ ಶಾಸನಗಳಲ್ಲಿ ದೊರಕುವುವು. ಇವುಗಳೆಲ್ಲಾ ಸಮವೃತ್ತಗಳು, ಬಳಿಕ ಸುಮಾರು ೮ನೆಯ ಶತಮಾನದಲ್ಲಿ ದೊರಕುವ ಕನ್ನಡ ಭಾಷೆಯ ಮೊತ್ತಮೊದಲನೆಯ ಗ್ರಂಥವಾದ ಕವಿರಾಜಮಾರ್ಗವೆಂಬ ಅಲಂಕಾರಗ್ರಂಥವು ಛಂದೋಬದ್ಧವಾದ ಗ್ರಂಥವಾಗಿರುವುದು. ಇದರಲ್ಲಿ ಮಾತ್ರಾವೃತ್ತಗಳಲ್ಲಿ ಬಹುಮುಖ್ಯವಾದ ಕಂದ (ಸ್ಕಂಧಕ) ವೆಂಬ ವೃತ್ತಜಾತಿಯೇ ಹೆಚ್ಚು. ಗೀತಿಕೆಯೆಂಬ ಮಾತ್ರಾವೃತ್ತವೂ ಅಲ್ಲಲ್ಲಿ ಅತ್ಯಲ್ಪವಾಗಿರುವುವು, ಇವಲ್ಲದೆ ಕನ್ನಡದಲ್ಲಿ ಪ್ರಸಿದ್ಧವಾಗಿರುವ ಉತ್ಪಲ ಮಾಲಾದಿ ಆರು ವೃತ್ತಗಳೂ ಇರುವುವು. ಸಮವೃತ್ತಗಳಲ್ಲಿ ಮಾಲಿನಿ, ಮಣಿವಿಭೂಷಣ, ದ್ರುತವಿಲಂಬಿತ, ಮಂಗಳವೃತ್ತಗಳೂ ಅರ್ಧಸಮವೃತ್ತಗಳಲ್ಲಿ ಪುಷ್ಪಿತಾಗ್ರಾವೃತ್ತವೂ, ಅನುಷ್ಟುಪ್‌ವೃತ್ತವೂ ಇವೆ ಮತ್ತೆ ಕೆಲವು ಅಕ್ಷರವೃತ್ತಗಳಿರುವುವು. ಅವುಗಳ ಹೆಸರು ತಿಳಿಯಬರುವುದಿಲ್ಲ. ಅವು ಯಾವ ಛಂದಶ್ಶಾಸ್ತ್ರವನ್ನನುಸರಿಸಿ ಬರೆದಿರುವುವೆಂಬುದನ್ನು ವಿಚಾರಮಾಡಬೇಕಾಗಿರುವುದು. ದೇಶೀಯ ವೃತ್ತಗಳಾದ ಅಕ್ಕರ, ತ್ರಿಪದಿ, ರಗಳೆಗಳು ಈ ಗ್ರಂಥದಲ್ಲಿಲ್ಲ. ಆದರೆ ಈ ಗ್ರಂಥಕರ್ತೃವಾದ ನೃಪತುಂಗನು ಈ ಕನ್ನಡಲಕ್ಷಣಗ್ರಂಥಕ್ಕೆ ಹಿಂದೆ ಕನ್ನಡದಲ್ಲಿ ವಿಮಳೋದಯ, ನಾಗಾರ್ಜುನ ಮೊದಲಾದ ಕವಿಗಳು ಗದ್ಯ ಕಾವ್ಯಗಳನ್ನೂ, ಪರಮ ಶ್ರೀ ವಿಜಯ ಮೊದಲಾದವರು ಪದ್ಯಕಾವ್ಯಗಳನ್ನೂ ಬರೆದಿರುವರೆಂದು ಹೇಳಿರುವನು, ಅವೊಂದೂ ಇದುವರೆಗೆ ದೊರಕಿಲ್ಲ. ಅಲ್ಲದೆ ಆತನೇ ಆ ಕಾಲದಲ್ಲಿ ಕನ್ನಡ ಭಾಷೆಯೊಳಗೆ [2]ಕಂದಗಳೂ, ವೃತ್ತಗಳೂ ಎಡೆಯೆಡೆಯಲ್ಲಿ ಒಂದೊಂದು ಜಾತಿಗಳೂ (ಮಾತ್ರಾವೃತ್ತ) ಇರುವುದು ಬೆದಂಡೆಗಬ್ಬವೆಂದೂ, ಕಂದಗಳು ಅಧಿಕವಾಗಿ, ಸುಂದರವಾದ ವೃತ್ತಗಳೂ, [3]ಅಕ್ಕರ, ಚೌಪದಿ, ಗೀತಿಗೆ, ತ್ರಿಪದಿ ಇವುಗಳು ಸೇರಿರುವ ಕಾವ್ಯವು ಚತ್ತಾಣವೆಂದೂ ಹೇಳಿರುವನು. ರಗಳೆಗಳ ವಿಷಯವನ್ನು ಈತನು ಎತ್ತಲಿಲ್ಲ. ಈ ಬೆದಂಡೆ ಚತ್ತಾಣಗಳು ಯಾವುವೆಂದು ಇದುವರೆಗೂ ತಿಳಿವಿಗೆ ಬಂದಿಲ್ಲ ಅವನಿಂದೀಚೆಗೆ ಹತ್ತನೆಯ ಶತಮಾನದಲ್ಲಿದ್ದ ಆದಿಪಂಪನಿಂದ ಬರೆಯಲ್ಪಟ್ಟ ಆದಿಪುರಾಣ-ವಿಕ್ರಮಾರ್ಜುನ

---

(1) ತಮಿಳಿನಲ್ಲಿ ಛಂದಸ್ಸನ್ನು ಯಾಪ್ಪೆಂದು ಕರೆಯುವರು, ಗುರುಲಘುಗಳಿಗೆ ಪ್ರತಿಯಾಗಿ ಅಶೈಯೆಂದೂ ಗಣಕ್ಕೆ ಬದಲಾಗಿ ಶೀರೆಂದೂ, ಯತಿಗೆ ಬದಲಾಗಿ ಮೋನೆಯೆಂದೂ, ಪ್ರಾಸಿಗೆ ಯದುಕೈ ಎಂದೂ ವ್ಯವಹಾರವಿದೆ. ಹಾಗೆಯೇ ವೃತ್ತಗಳಲ್ಲೂ, ಛಂದಸ್ಸಿನಲ್ಲೂ ವಿಶೇಷ ವೈಲಕ್ಷಣ್ಯವುಂಟು, ತೆಲುಗಿನಲ್ಲಿ ಛಂದಸ್ಸು ವೃತ್ತ ಗುರು ಲಘು ಗಣ ಯತಿ ಈ ಸಂಜ್ಞೆಗಳೆಲ್ಲವನ್ನೂ ಸ್ವೀಕರಿಸಿರುವರು, ಯತಿಯನ್ನು ಮಾತ್ರ ವಡಿಯೆಂದು ಮತ್ತೊಂದು ಹೆಸರಿನಿಂದ ಕರೆಯುವರು, (2) ಬಂಧುವರ್ಮನ ಹರಿವಂಶವು ಮಾತ್ರ ಒಂದು ಕಂದ ಅಥವಾ ವೃತ್ತ, ಒಂದು ಗದ್ಯ ಈ ಬಗೆಯಲ್ಲಿ ಬರೆಯಲ್ಪಟ್ಟಿದೆ, (3) ಅಕ್ಕರ, ತ್ರಿಪದಿ, ಕಂದ, ವೃತ್ತಗಳು, ಇವುಗಳಿರುವ ಪಂಪಾದಿಗಳ ಕಾವ್ಯವನ್ನು ಚತ್ತಾಣವೆಂದು ಹೇಳಬಹುದೇ? ಎಂದು ಶಂಕೆಯುಂಟಾಗುವುದು.

ವಿಜಾಯ ಎಂಬ ಗ್ರಂಥಗಳು, ಚಂಪೂ ಕಾವ್ಯಗಳು – ಇವುಗಳಲ್ಲಿ ಪದ್ಯಗಳು ವಿಶೇಷವಾಗಿವೆ. ಹಾಗಿದ್ದರೂ ಇವು [1]ಗದ್ಯಗ್ರಂಥಗಳೆಂದು ನೃಪತುಂಗನು ಹೇಳಿರುವನು, ಇವುಗಳಲ್ಲಿ ಕಂದಗಳೂ, [2]ವೃತ್ತಗಳೂ, ಅಕ್ಕರ, ತಿವಿದಿ, ರಗಳೆಗಳೂ ಇರುವುವು. ಈ ನಾಗವರ್ಮನು ಛಂದೋಂಬುಧಿಯಲ್ಲಿ ಹೇಳಿರುವ ದೇಶೀಯ ವೃತ್ತಗಳಾದ, ಮದನವತಿ , ಚೌಪದಿ, (ಇದನ್ನುಮಾತ್ರ ನೃಪತುಂಗನು ಹೇಳಿರುವನು) ಏಳೆ, ಉತ್ಸಾಹ, ಅಕ್ಕರಿಕೆ, ಛಂದೋವತಂಸ, ಈ ವೃತ್ತಗಳನ್ನು ಈ ಪ್ರಾಚೀನ ಗ್ರಂಥದಲ್ಲಿ ಕಂಡುಬರುವುದಿಲ್ಲ. ಈಚಿನ ಗ್ರಂಥಗಳಲ್ಲೂ ಇಲ್ಲ ಒಟ್ಟಿನಲ್ಲಿ ನಾಗವರ್ಮನು ತನ್ನ ಲಕ್ಷಣಗ್ರಂಥದಲ್ಲಿ ಆ ಕಾಲದಲ್ಲಿ ಪ್ರಚಾರದಲ್ಲಿದ್ದ ಛಂದಸ್ಸೆಲ್ಲವನ್ನೂ ಸಮಗ್ರವಾಗಿಯೂ, ಸಮರ್ಪಕವಾಗಿಯೂ ವಿವರಿಸಿ ಹೇಳಿರುವನೆಂಬುದು ನಿಶ್ಚಪ್ರಚವು.

ಯತಿ ವಿಷಯದಲ್ಲಿ— ನಾಗವರ್ಮನು ಸಂಸ್ಕೃತದ [3]ಕೆಲವರ ಮತವನ್ನನುಸರಿಸಿ, ಯತಿಯನ್ನು ಅವಶ್ಯಕವಾಗಿ ಅನುಸರಿಸಲೇಬೇಕೆಂದು ನಿಯಮ ಮಾಡುವನು ಆದರೆ ಆಲಂಕಾರಿಕನಾದ ನೃಪತುಂಗನು ಸಂಸ್ಕೃತ ಛಂದಸ್ಕರಲ್ಲಿ [4]ಕೆಲವರ ಮತವನ್ನನುಸರಿಸಿ, ಯತಿಯನ್ನು ಆಶ್ರಯಿಸಲೇಬೇಕೆಂದೂ, ಯತಿಯನ್ನು ಮಿಕ್ಕರೆ ಯತಿಭಂಗವೆಂಬ ದೋಷವು ಪ್ರಾಪ್ತವಾಗುವುದೆಂದೂ ಹೇಳಿ, ಕನ್ನಡದಲ್ಲಿ ಮಾತ್ರ ಕವಿಗಳು ಖಂಡಪ್ರಾಸವು (ದ್ವಿತೀಯಾಕ್ಷರ ಪ್ರಾಸವು) ಅತಿಶಯವೆಂದು, ಅದನ್ನು ಆಶ್ರಯಿಸಿ ಯತಿಯನ್ನು ಮಿಕ್ಕಿರುವರು. ಆದುದರಿಂದ ಅದನ್ನು ಸಮ್ಮತಿಸಲೇಬೇಕೆಂದು ಹೇಳಿರುವನು

ಗುರು ಲಘು ನಿರ್ಣಯದಲ್ಲಿ ಸಂಯುಕ್ತಾದ್ಯಕ್ಷರದ ಗುರುವು ಕೆಲವು ಸಂದರ್ಭಗಳಲ್ಲಿ ಹ್ರಸ್ವವಾಗುವುದು ಎಂಬ ಸಂಪ್ರದಾಯವನ್ನು ನಾಗವರ್ಮನು ಹೇಳಲಿಲ್ಲ. ಆದರೆ ಇವನಿಗಿಂತ ಅರ್ವಾಚೀನನಾದ ವೈಯಾಕರಣನಾದ ಕೇಶಿರಾಜನು ಶಬ್ದಮಣಿದರ್ಪಣದಲ್ಲಿ ಈ ಬಗೆಯ ಗುರುವು ಲಘುವಾಗುವುದೆಂಬುದನ್ನು ಶಿಥಿಲದ್ವಿತ್ವವೆಂದು ಸಂಜ್ಞೆ ಮಾಡಿರುವನು. ಸಂಸ್ಕೃತದ ವೃತ್ತರತ್ನಾಕರದಲ್ಲಿಯೂ ಮೊದಲನೆಯ ಮತ್ತು ಎರಡನೆಯ ಪಾದಗಳ ಕೊನೆಯಲ್ಲಿರುವ ಸಂಯುಕ್ತಾಕ್ಷರಕ್ಕೆ “ ಕ್ರಮ ” ಎಂದು ಸಂಜ್ಞೆಯನ್ನು ಹೇಳಿ, ಅದರ ಹಿಂದಣ ಸಂಯುಕ್ತಾದ್ಯ (ವಾದ) ಅಕ್ಷರವು ಕೆಲವು ವೇಳೆ ಲಘುವಾಗುವುದೆಂದು ಹೇಳಿರುವನು. ಪ್ರಾಕೃತ ಛಂದಸ್ಸಿನಲ್ಲೂ ಪ್ರ. ಹ್ರ. ಎಂಬ ಸಂಯುಕ್ತಾಕ್ಷರಗಳ ಹಿಂದಣ

---

(1) ಮಿಗೆ ಕನ್ನಡಗಬ್ಬಂಗಳೊಳಗಣಿತಗುಣಗದ್ಯಪದ್ಯ ಸಮ್ಮಿಶ್ರಿತಮಂ । ನಿಗದಿಸುವರ್ ಗದ್ಯಕಥಾ ಪ್ರಗೀತಿಯಿಂ ತಚ್ಚಿರಂತನಾಚಾರ್ಯರ್ಕಳ್ (೧ವಿ. ಪರಿ—೧, ಪ—೨೭), (2) ವೃತ್ತಗಳಲ್ಲಿ ಉತ್ಪಲಮಾಲಾದಿ ಆರು ವೃತ್ತಗಳು ವಿಶೇಷವಾಗಿವೆ – ಮಾಲಿನಿ, ಹರಿಣಿ, ಪೃಥ್ವೀ ಮೊದಲಾಗಿ ಕೆಲವು ಪ್ರಸಿದ್ಧಗಳಾದ ಅಕ್ಷರ ವೃತ್ತಗಳು ಅಲ್ಲಲ್ಲಿ ಇರುವುವು, (3) ಅಧಿಕರಣ ೧, ಪ. ೪೫ (ಯತಿ ಕಿಡೆ ಕವಿತಾಭಿಮಾನವೇನಸೆವುದುಮೇ), (4) ಶ್ವೇತಮಾಂಡವ್ಯಮುಖ್ಯಾಸ್ತು ನೇಚ್ಛಂತಿ ಮುನಯೋ ಯತಿಂ.

ಅಕ್ಷರವು ವಿಕಲ್ಪವಾಗಿ ಲಘುವಾಗುವುದೆಂದು ಹೇಳಿರುವುದು. ಕನ್ನಡದ ಶಿಥಿಲದ್ವಿತ್ವಕ್ಕೆ ಈ ಸಂಪ್ರದಾಯುವೇ ಉಪಲಕ್ಷಣೆಯೆಂದು ಹೇಳಬಹುದು. ಪ್ರ ಹ್ರ. ದ್ವಿತ್ವಗಳ ಪೂರ್ವ ಗುರುವು ಹ್ರಸ್ವವಾಗುವ ಸಂಪ್ರದಾಯವು ಸಂಸ್ಕೃತದಲ್ಲೂ ಉಂಟು *

## ಗ್ರಂಥ ಮತ್ತು ಗ್ರಂಥಕರ್ತೃವು

### (೧) ಗ್ರಂಥ ವಿಚಾರ

ಈ ಗ್ರಂಥಕ್ಕೆ "ಛಂದೋಂಬುಧಿ"ಯೆಂದು ಹೆಸರು, [1]"ಛಂದೋಂಬುರಾಶಿ" [2]"ನಾಗ ವರ್ಮ ಛಂದಸ್ಸು" ಎಂಬ ಹೆಸರುಗಳೂ ಇರುವುವೆಂದು ಈ ಗ್ರಂಥದಿಂದಲೇ ತಿಳಿದು ಬರುವುದು. ಇದು ಕನ್ನಡ ಕಾವ್ಯಗಳಲ್ಲಿ ಬಳಕೆಯಲ್ಲಿರುವ ಛಂದಸ್ಸುಗಳ ಲಕ್ಷ್ಯಲಕ್ಷಣ ಗಳನ್ನು ಪ್ರತಿಪಾದಿಸುವ ಗ್ರಂಥ ಇದರಲ್ಲಿ ಪ್ರಾಯಶಃ ಲಕ್ಷಣಪದ್ಯಗಳೇ ಲಕ್ಷ್ಯಗಳಾಗಿಯೂ ಇರುವುವು ಕಂದಗಳೂ, ಉತ್ಪಲಮಾಲೆ ಮೊದಲಾದ ಕರ್ಣಾಟಕದಲ್ಲಿ ಪ್ರಖ್ಯಾತವಾದ ಆರು ವೃತ್ತಗಳೂ ಈ ಗ್ರಂಥದಲ್ಲಿ ಅಲ್ಲಲ್ಲಿ ಬರುವುವು ಅಧಿಕಾರಗಳು ಆರು. ಪ್ರಥಮಾಧಿ ಕಾರದಲ್ಲಿ ವಿಷ್ಣು ಮೊದಲಾದ ಐದು ದೈವಗಳಿಗೆ ಸಂಬಂಧಿಸಿದ ಮಂಗಳ ಪದ್ಯದಿಂದ (ವಿಷ್ಣು ಪಂಚಾಯತನ) ಗ್ರಂಥವು ಆರಂಭವಾಗಿದೆ. ಬಳಿಕ ಸರಸ್ವತೀಸ್ತುತಿ, ಕವಿಯ ಪಾಂಡಿತ್ಯ ಪ್ರಶಂಸೆ, ಕವಿಯ ವಂಶಾನುಕ್ರಮ, ಮತ್ತೆ ಕವಿಯ ಪ್ರಶಂಸೆ, ಕವಿಯ ಪೋಷಕನ ಪ್ರಶಸ್ತಿ, ಛಂದಶ್ಶಾಸ್ತ್ರದ ಮೂಲ, ಇವನ್ನು ಹೇಳಿ ಗ್ರಂಥದಲ್ಲಿ ಪ್ರತಿಪಾದ್ಯ ವಿಷಯವನ್ನು ತನ್ನ ಪ್ರಿಯೆಯನ್ನು ಕುರಿತು ಹೇಳಿದಂತೆ ಹೇಳಿ ಅಲ್ಲಲ್ಲಿ – ಕೇಳು, ತನೂದರಿ, ಪ್ರಿಯೆ, ಮೃಗನೇತ್ರೆ, ಅಬ್ಜಮುಖಿ, ಆಯತಾಕ್ಷಿ ಮೊದಲಾದ ಸಂಬೋಧನಾಶಬ್ದಗಳನ್ನು ಪ್ರಯೋಗಿಸಿರುವನು. ಬಳಿಕ ಗಣಗಳ ಹೆಸರು, ಗುರುಲಘುಗಳ ಚಿಹ್ನೆ, ಗುರುಲಘುಗಳ ಸ್ವರೂಪ, ಗಣಗಳ ಸ್ವರೂಪ, ಗಣಪ್ರಸ್ತಾರ (ಎರಡು ಬಗೆಯಲ್ಲಿ), ಗಣಫಲ, ಯತಿ ಸ್ವರೂಪ, ಪ್ರಾಸವಿಚಾರ, [3]ಪ್ರಾಸಭೇದ, ಉಕ್ತಾದಿ ಇಪ್ಪತ್ತಾರು ಛಂದಸ್ಸುಗಳ ಹೆಸರು, ದೇಶೀಯ ವೃತ್ತಜಾತಿಗಳ ಹೆಸರು ಇವನ್ನು ಹೇಳಿ, ಅಧಿಕಾರವನ್ನು ಉಪಸಂಹರಿಸಿರುವನು. ಆಶ್ವಾಸಾಂತ್ಯ ಗದ್ಯದಲ್ಲಿ ಹಲವು ಪಾಠಗಳಿವೆ. ಇದರಿಂದ ಪ್ರಾಯಶಃ ಹಲವು ಛಂದೋ ಗ್ರಂಥಗಳು ಈ ಪ್ರಕೃತ ಗ್ರಂಥದಲ್ಲಿ ಮಿಶ್ರವಾಗಿರುವಂತೆ ತೋರುವುದು.

ದ್ವಿತೀಯಾಧಿಕಾರದಲ್ಲ ಉಕ್ತೆ ಮೊದಲಾದ ೨೬ ಛಂದಸ್ಸಿನಲ್ಲಿ ಹುಟ್ಟುವ ಮುಖ್ಯ ಮುಖ್ಯವಾಗಿರುವ ಕೆಲವು ವೃತ್ತಗಳ ಹೆಸರನ್ನೂ, ಲಕ್ಷಣಗಳನ್ನೂ ನಿರೂಪಿಸಿರುವನು.

---

(1) ಪು ೩, ಪ ೩೦, (2) ಪು ೩, ಪ ೩೧, (3) ಈ ಪದ್ಯಗಳು ಕವಿರಾಜ ಮಾರ್ಗದಲ್ಲಿರು ವಂತಯೇ ಸ್ವಲ್ಪ ಮಾರ್ಪಾಡಿನಿಂದ ಇಲ್ಲಿ ಬಂದಿವೆ. ಉದಾಹರಣಗಳೆಲ್ಲವೂ ಅರ್ವಾಚೀನಗಳೆಂದು ತೋರುವುದು.

* ದಾರಿದ್ರ್ಯವೃದ್ಧಿರ್ವ್ಯಯಮೇತಿ ಹ್ರೀಪರಂಗತಃ (ಭರ್ತೃ–ಸುಭಾ).

ಹನ್ನೊಂದನೆಯ ಛಂದಸ್ಸಿನಲ್ಲಿ, ಇಂದ್ರವಜ್ರ, ಉಪೇಂದ್ರವಜ್ರವೃತ್ತಪಾದಗಳ ಮಿಶ್ರದಿಂದಾಗುವ ಉಪಜಾತಿವೃತ್ತಗಳನ್ನು ನಾಗವರ್ಮನು ಹೇಳಿಲ್ಲ.

ತೃತೀಯಾಧಿಕಾರದಲ್ಲಿ ಇಪ್ಪತ್ತಾರು ಛಂದಸ್ಸಿನ ಹೊರಗೆ ೩೦ ಅಕ್ಷರಗಳ ಪಾದವುಳ್ಳ ಮಾಲಾವೃತ್ತಗಳು, ಅರ್ಧಸಮ ವಿಷಮವೃತ್ತಗಳು, ಉದ್ಗತಾವೃತ್ತ, ತದ್ಭೇದ, ಪದ, ಚತುರೂರ್ಧ್ವ, ಅನುಷ್ಟುಪ್ ವೈತಾಳೀಯ (ಕೇವಲ ಮಾತ್ರಾವೃತ್ತ) ಜಾತಿಗಾಥೆಗಳು, ರಗಳೆಗಳು, ದಂಡಕಗಳು (ಪಾದನಿಯಮವಿಲ್ಲದುವು) ಇವುಗಳನ್ನು ಪ್ರತಿಪಾದಿಸಿದೆ.

ಚತುರ್ಥಾಧಿಕಾರದಲ್ಲಿ ಕಂದ ಮತ್ತು ಆರ್ಯಾದಿಗಳಲ್ಲಿ ಬರುವ ನಾಲ್ಕು ಮಾತ್ರೆಗಳ ಗಣಗಳನ್ನು ವಿವರಿಸಿ, ಕಂದಲಕ್ಷಣ, ಆರ್ಯಾವೃತ್ತಲಕ್ಷಣಗಳು, ಗೀತಿಕೆ, ಸಂಕೀರ್ಣಕ, ದುವಯಿ ಇವುಗಳು ವಿವರಿಸಲ್ಪಟ್ಟಿವೆ

ಪಂಚಮಾಧಿಕಾರದಲ್ಲಿ ದೇಶೀಯ ಛಂದಸ್ಸಿಗೆ ಸಂಬಂಧಿಸಿದ ಬ್ರಹ್ಮ, ವಿಷ್ಣು, ಮಹೇಶ್ವರ ಗಣಗಳ ಸ್ವರೂಪ, ಅವುಗಳಪ್ರಸ್ತಾರಕ್ರಮ ಇವುಗಳಿಂದ ಆದ ಅಯ್ದು ಅಕ್ಕರಗಳು, ತ್ರಿಪದಿ, ಏಳೆ, ಚೌಪದಿ, ಛಂದೋವತಂಸ, ಅಕ್ಕರಿಕೆ, ಮದನವತಿ, ಗೀತಿಗೆ, ಉತ್ಸಾಹ, ಉತ್ಸಾಹದಂಡಕ [1](ಶರಷಟ್ಪದಿ) ಈ ದೇಶೀಯ ಜಾತಿಗಳು ಹೇಳಲ್ಪಟ್ಟಿವೆ.

ಷಷ್ಠಾಧಿಕಾರದಲ್ಲಿ ಪ್ರಸ್ತಾರ ಮೊದಲಾದ ಆರು ಪ್ರತ್ಯಯಗಳು ವಿವರಿಸಲ್ಪಟ್ಟಿವೆ.

## (೨) ಗ್ರಂಥಕರ್ತೃವಿನ ವಿಚಾರ

"ಛಂದೋಂಬುಧಿ"ಯೆಂಬ ಈ ಗ್ರಂಥವನ್ನು ಬರೆದವನು ನಾಗವರ್ಮನು, ಇವನಿಗಿಂತ ಈಚೆಗೆ ಮತ್ತೊಬ್ಬ ನಾಗವರ್ಮನಿರುವುದರಿಂದ (೧೧೪೫) ಇವನನ್ನು ಪ್ರಥಮ (ಮೊದಲನೆಯ) ನಾಗವರ್ಮನೆಂದು ಕವಿಚರಿತ್ರಕಾರರು ನಿರ್ದೇಶಿಸಿರುವರು. ಇವನಿಗೆ ನಾಕಿ, ನಾಕಿಗ ಎಂಬ ಪರ್ಯಾಯ ನಾಮಗಳೂ ಉಂಟು. ಈತನು ತನ್ನನ್ನು ಈ ಗ್ರಂಥದಲ್ಲಿ ಸಯ್ಯಡಿಯಾತ, ತೆಂಕನಾಡಾತ, ಎಂದೂ ಹೇಳಿಕೊಂಡಿರುವನು. ಫಣಿವರ್ಮ (ನಾಗ ಶಬ್ದ ಪರ್ಯಾಯವಾದ ಫಣಿ ಶಬ್ದ ಸಂಯೋಗದಿಂದ) ಎಂಬ ವ್ಯವಹಾರವೂ ಇದ್ದಂತೆ ತಿಳಿಯಬರುವುದು. ಇವನು ವೆಂಗಿ ವಿಷಯದ ಸಪ್ತಗ್ರಾಮಕ್ಕೆ ಸೇರಿದ ವೆಂಗಿಪಟು ಎಂಬ ಆಗ್ರಹಾರದವನು, ಪ್ರಾಯಶಃ ಇವನು ವಾಸಮಾಡುವ ಆಗ್ರಹಾರಕ್ಕೆ ಅಥವಾ ಆಗ್ರಹಾರ ಭಾಗಕ್ಕೆ ಸಯ್ಯಡಿಯೆಂಬ ಹೆಸರೂ ಇದ್ದಂತೆ ತಿಳಿದುಬರುವುದು. ಈತನು ತನ್ನ ಗ್ರಂಥದಲ್ಲಿ "ಸಯ್ಯಡಿಯ ಪಿನಾಕಿ ಕೂರ್ತು ನಮಗೀಗೆ ವರಂಗಳಂ" ಎಂದು ಹೇಳಿಕೊಂಡಿರುವುದರಿಂದ

---

(1) ನಾಗವರ್ಮನು ಶರಷಟ್ಪದಿಯನ್ನೆ ಮಾತ್ರ ವಿವರಿಸಿರುವನು. ಉಳಿದ ಐದನ್ನು ವಿವರಿಸಿಲ್ಲ, ಈ ಒಂದು ಷಟ್ಪದಿಯೂ ಪಂಪಾದಿಗಳಿಂದ ಚಂಪೂಕಾವ್ಯಗಳಲ್ಲಿ ಪ್ರಯುಕ್ತವಾಗಿಲ್ಲ.

ಸಯ್ಯಡಿಯ ಮಹೇಶ್ವರನೇ ಈತನ ಕುಲದೈವವೆಂದೂ ತಿಳಿದುಬರುವುದು, ಇವನು ಕೌಂಡಿನ್ಯ ಗೋತ್ರದ ವೇದವೇದಾಂಗಗಳಲ್ಲಿ ಪಾರಂಗತನಾಗಿದ್ದ ವೆಣ್ಣಮಯ್ಯ ಕೌಂಡಿಕಬ್ಬೆಯರ ಮರಿಮಗನು, ದಾಮಮಯ್ಯ ಕುಂದಕಬ್ಬೆಯರ ಮುಮ್ಮಗನು, ವೆಣ್ಣಮಯ್ಯ ಪೋಳ ಕಬ್ಬೆಯರ ಮಗನು, ಈ ವೆಣ್ಣಮಯ್ಯನು ಲೌಕಿಕ, ವೈದಿಕ, ಶಾಸ್ತ್ರವಿವೇಕ–ಕಲಾಭಿಜ್ಞನಾಗಿದ್ದನು, ಇವನ ಮಗನಾದ ನಾಗವರ್ಮನೂ ಕೂಡ ತನ್ನನ್ನು ಯುದ್ಧದಲ್ಲಿ ಅದ್ವಿತೀಯ ವೀರನು, ಶಾಸ್ತ್ರಗಳಲ್ಲಿ ನಿಪುಣನು, ವಿಶೇಷ ಸಿರಿವಂತನು, ಶೌಚ–ಸತ್ಯ–ಔದಾರ್ಯ ಈ ಗುಣಗಳಿಗೆ ಆಧಾರನು, ಸಾಹಿತ್ಯದಲ್ಲಿ ಅಸಮಾನನು, ಸಚ್ಚಾರಿತ್ರನು, ಸತ್ಕೀರ್ತಿಶಾಲಿಯು, ಕವಿತ್ವದಲ್ಲಿ ಕಾಳಿದಾಸನನ್ನೂ, ಔದಾರ್ಯದಲ್ಲಿ ವಿಕ್ರಮಾದಿತ್ಯನನ್ನೂ ಮೀರಿದವನು, ಅತಿಶಯ ವಾಕ್ಸಂಪನ್ನನು, ಶತಪತ್ರೋದ್ಭವ ಮಹಾವಂಶೋತ್ಪನ್ನನು, ಚತುರಕವಿಕುಲಲಲಾಮನು, ಬ್ರಹ್ಮ ಬೃಹಸ್ಪತಿ ಇವರಿಗೆ ಸಮಾನನು, ಅಪ್ರತಿಮನು ಎಂದು ತನ್ನ ಗ್ರಂಥದಲ್ಲಿ ಹೇಳಿಕೊಂಡಿರುವನು

ನಾಗವರ್ಮನಿಗೆ ಅರಸನು ರಕ್ಕಸಗಂಗನು. ಅಜಿತಸೇನ ಪಂಡಿತದೇವರು ಗುರುಗಳು. ಪೊರೆದವನು ಗಂಡರ ಮೂಗುತಿಯೂ, ಮಂಡಳಿಕರ ಸಂಧಿವಿಗ್ರಹಿಯೂ, ಮಂತ್ರಿಯೂ ಆದ ರಾಯನು (ಚಾವುಂಡರಾಯನು). ವೈದಿಕಮತದವನಾದ ಈ ನಾಗವರ್ಮನು ಜೈನಮತದ ಅಜಿತಸೇನ ಪಂಡಿತದೇವರು ತನ್ನ ಗುರುಗಳು ಎಂದು ಹೇಳಿರುವುದು ಆಯುಕ್ತವು ಎಂಬ ಶಂಕೆಯು ಹುಟ್ಟುವುದು ಸಹಜವು, ಆದರೆ, ತನ್ನ ಪೋಷಕನಾದ ರಾಯನಿಗೂ, ಆತನಿಗೂ ತನಗೂ ಅರಸಾದ ರಕ್ಕಸಗಂಗನಿಗೂ ಗುರುಗಳಾದ ಅಜಿತಸೇನ ಪಂಡಿತ ದೇವರನ್ನು ತನ್ನ ಗುರುಗಳೆಂದು ಔಪಚಾರಿಕವಾಗಿ ಹೇಳಿರುವನೆಂದಾಗಲಿ, ಅಥವಾ ಈತನು ತನ್ನ ಜೀವಿತದಲ್ಲಿ ಕೆಲವು ಕಾಲವಾದಬಳಿಕ ಜೈನಮತವನ್ನವಲಂಬಿಸಿರಬಹುದೆಂದಾಗಲಿ ಸಮಾಧಾನವನ್ನು ಮಾಡಿಕೊಳ್ಳಬಹುದು.

ಈತನ ಕಾಲವನ್ನು ಈತನ ಪೋಷಕನಾದ ಚಾವುಂಡರಾಯ, (೯೮೫) ಮತ್ತು ರಕ್ಕಸಗಂಗ ಇವರ ಕಾಲಗಳ (೯೭೫) ಆಧಾರದಿಂದಲೂ, ಈತನು ತನ್ನಿಂದ ರಚಿತವಾದ ಕನ್ನಡ ಕಾದಂಬರಿಯ ಕೊನೆಯಲ್ಲಿ ಭೋಜರಾಜನು(೯೮೦–೧೦೮೦)ಕವಿಗಳಿಗೆ ವಿಶೇಷವಾಗಿ ಸನ್ಮಾನಿಸುತ್ತಿದ್ದನು ಎಂದು ಹೇಳಿರುವ ಆಧಾರದಿಂದಲೂ, ನಿರ್ಧರಿಸಬಹುದು. ಆದುದರಿಂದ ಇವನ ಕಾಲವು ಸುಮಾರು ೯೯೦ ಎಂದು ಹೇಳಬಹುದು.

ಇವನು ತನಗೆ ಸುಕವೀಂದ್ರವಲ್ಲಭ, ನೆಗಳ್ತೆಗೋಜ. ಕವಿನಾಗವರ್ಮ, ಕವಿರಾಜಹಂಸ, ಭೂಮಿಕಂದರ್ಪ, ಸತ್ಕವಿನಾಗವರ್ಮ, ವಸ್ತುಕ ಕವಿಪ್ರವರಸ್ತುತ, ಪ್ರಭುಕವೀಂದ್ರ ಸಹಾಯ, ಕಂದಕಂದರ್ಪ, ವಿದ್ವಜ್ಜನಾನಂದ, ಬುಧಜನಹಿತ, ಸತ್ಕವಿಪ್ರೇಮ,

ಕವೀಂದ್ರಸಹಾಯು, ಕವಿಕುಲಲಲಾಮು, ಹಂಸ, (೨-೬೭) ಎಂಬ ಬಿರುದುಗಳಿದ್ದಂತೆ ಅಲ್ಲಲ್ಲಿ ಈ ಗ್ರಂಥದೊಳಗೆ ಹೇಳಿಕೊಂಡಿರುವನು, ಈ ಬಿರುದುಗಳಲ್ಲೆಲ್ಲಾ ಕವಿರಾಜಹಂಸ ಎಂಬ ಬಿರುದೇ ಇವನಿಗೆ ತುಂಬಾ ಪ್ರಿಯವಾದುದೆಂದು ಹೇಳಬಹುದು. ಪ್ರತಿಯೊಂದು ಅಧಿಕಾರದ ಕೊನೆಯಲ್ಲಿರುವ ಗದ್ಯಗಳಲ್ಲೆಲ್ಲಾ ಇದನ್ನೇ ಹೇಳಿಕೊಂಡಿರುವನು.

ಈತನು ತನ್ನ ಈ ಶಾಸ್ತ್ರಕ್ಕೆ ಈಶನು ಪಾರ್ವತಿಗೆ ಹೇಳಿದುದನ್ನು ಪರಂಪರೆಯಾಗಿ ಪಡೆದು ಲೋಕದಲ್ಲಿ ಹರಡಿದ ಪಿಂಗಳನ ಛಂದಶ್ಶಾಸ್ತ್ರವೇ ಆಧಾರವೆಂದು ಹೇಳಿರುವನಲ್ಲದೆ, ಗ್ರಂಥದಲ್ಲಿ ಅಲ್ಲಲ್ಲಿ ಪಿಂಗಳೋಕ್ತಿ, ಪಿಂಗಳನ ಮತ, ಎಂದೂ ಹೇಳಿರುವನು, ಅಲ್ಲದೆ ಆರನೆಯ ಅಧಿಕಾರದಲ್ಲಿ "ಜಯದೇವನೇ ಮೊದಲಾದವರ ಮತದಂತೆ ಹಿಂದಿನ ಛಂದಸ್ಸನ್ನೆಲ್ಲಾ ಹೇಳಿರುವೆನು. ಇನ್ನು ಷಟ್ಪ್ರತ್ಯಯವನ್ನು ಹೇಳುವೆ"ನೆಂದು ಹೇಳಿಕೊಂಡಿರುವನು. ಆದರೆ ಕಿಟ್ಟೆಲ್ ಸಾಹೇಬರು ಜಯದೇವಾದ್ಯರ ಛಂದದ ಎಂಬ ಪಾಠಕ್ಕೆ ಪ್ರತಿಯಾಗಿ ಬಯಸಿದ ದೇವಾಕ್ಷರದ ಪ್ರಯೋಗ ಎಂಬ ಪಾಠವನ್ನಿಟ್ಟುಕೊಂಡು ದೇವಾಕ್ಷರ ಎಂಬುದು ದೇಶೀಯ (ಬ್ರಹ್ಮ ವಿಷ್ಣು ರುದ್ರ) ಗಣಕ್ಕೆ ಹೆಸರೆಂದೂ, ಅದರಿಂದಾದ ವೃತ್ತಗಳನ್ನು ಹಿಂದೆ ಹೇಳಿಯಾಯಿತೆಂದು ಕವಿಯ ಅಭಿಪ್ರಾಯವೆಂದೂ, ಅರ್ಥಮಾಡಿಕೊಂಡಿರುವರು.

ಈ ಪಾಠದ ಅರ್ಥದಲ್ಲಿ 'ಬಯಸಿದ' ಎಂಬ ಶಬ್ದಾರ್ಥಕ್ಕೆ ಪೋಷವಿಲ್ಲದೇ ಹೋಗುವುದಲ್ಲದೆ, ದೇವಾಕ್ಷರ – ದೇವತೆಗಳ ಅಕ್ಷರ ಎನ್ನುವ ಪದಕ್ಕೆ ಬ್ರಹ್ಮಾದಿಗಣಗಳೆಂಬ ಅರ್ಥವೂ ಕೇವಲ ಕಲ್ಪಿತವೇ ಹೊರತು, ಸುರಸವಲ್ಲ ಜಯದೇವನೆಂಬುವನು ಒಬ್ಬ ಛಂದಶ್ಶಾಸ್ತ್ರ ಕರ್ತೃವೆಂದು ವಿರಹಾಂಕನು ತನ್ನ ವೃತ್ತಜಾತಿಸಮುಚ್ಚಯವೆಂಬ ಗ್ರಂಥದಲ್ಲಿ ಹೇಳಿರುವನು. ಆದುದರಿಂದ ಜಯದೇವಾದ್ಯರ ಎಂಬ ಪಾಠವೇ ಸಾಧುವೆಂದು ಸ್ವೀಕರಿಸಿ ಅದನ್ನೇ ಇಲ್ಲಿ ಕೊಟ್ಟಿದೆ.

ಈತನು ಕನ್ನಡ ಛಂದಶ್ಶಾಸ್ತ್ರದಲ್ಲಿ ಗುರುಲಘು ಸ್ವರೂಪವನ್ನು ಹೇಳುವಾಗ ಕನ್ನಡದಲ್ಲಿ ವಿಶೇಷವಾಗಿ ಪ್ರಚಾರದಲ್ಲಿರುವ ಶಿಥಿಲದ್ವಿತ್ವದ ವಿಚಾರವನ್ನು ಹೇಳಬೇಕಾಗಿತ್ತು. ಅದನ್ನು ಹೇಳಿಲ್ಲ. ಆದರೆ ಇವನಿಗಿಂತ ತುಂಬಾ ಅರ್ವಾಚೀನನಾದ ಕೇಶಿರಾಜನು ತನ್ನ ಶಬ್ದಮಣಿದರ್ಪಣವೆಂಬ ವ್ಯಾಕರಣಗ್ರಂಥದ ಸಂಜ್ಞಾ ಪ್ರಕರಣದಲ್ಲಿ ಈ ಶಿಥಿಲ ದ್ವಿತ್ವವನ್ನು ವಿಸ್ತರವಾಗಿ ಹೇಳಿರುವನು. ಈ ಗುರುಲಘು ವಿಚಾರವು ವ್ಯಾಕರಣ ಶಾಸ್ತ್ರಕ್ಕೂ ಆವಶ್ಯಕವಾದುದರಿಂದ ಆತನು ಅಲ್ಲಿ ಹೇಳಿರುವನು. ಈ ಕೇಶಿರಾಜನಿಗಿಂತ ಹಿಂದಣವನಾದ ಕಾವ್ಯಾವಲೋಕನವೆಂಬ ಅಲಂಕಾರಗ್ರಂಥವನ್ನೂ, ಭಾಷಾಭೂಷಣ (ಮತ್ತು ಶಬ್ದಸ್ಮೃತಿ) ಎಂಬ ವ್ಯಾಕರಣ ಗ್ರಂಥಗಳನ್ನೂ ಬರೆದಿರುವ ದ್ವಿತೀಯ ನಾಗವರ್ಮನು ಕೂಡ ಈ ಶಿಥಿಲದ್ವಿತ್ವ ವಿಚಾರವನ್ನೇ ಎತ್ತಲಿಲ್ಲ. ಆದರೆ ಅವನು ತನ್ನ ಗ್ರಂಥದಲ್ಲಿ ಉದಾಹ

ರಣವಾಗಿ ಕೊಟ್ಟಿರುವ ಈ ಪದ್ಯದಲ್ಲಿ ಶಿಥಿಲದ್ವಿತ್ವದ ಸ್ವರೂಪವನ್ನು ಔಪಮ್ಯದೊಡನೆ ವರ್ಣಿಸಿರುವ ಒಬ್ಬ ಪ್ರಾಚೀನ ಕವಿಯ ಕಾವ್ಯದಿಂದ ಆರಿಸಿರುವ ಈ ಪದ್ಯವನ್ನು ಕೊಟ್ಟಿರುವೆನು—

ಕಂ || ಓರೆಂಜಲ್ಗೊರ್ಪೆಂತಿಗೆ |
ವಾರದ ಖಳರೊಡನೆ ಬೆರಸಿ ಮೇಳಂಗೊಂಡಂ ||
ದಾರುಂ ಲಘುವಪ್ಪರ್ ಪ್ರ |
ಸ್ತಾರದೊಳಮದೆಂಬ ಶಿಥಿಲ ಸಂಯೋಗದವೋಲ್ (ಕಾವ್ಯಾ) ||೨೫||

ಈ ಪದ್ಯದಿಂದ ಶಿಥಿಲ ಸಂಯೋಗದ ಹಿಂದಣ ಗುರುವು ಲಘುವಾಗುವುದೆಂದೂ ಈ ಬಗೆಯ ಸಂಪ್ರದಾಯವು ಪ್ರಾಚೀನಕಾಲದಿಂದಲೂ ಇತ್ತೆಂಬುದೂ ಸಿದ್ಧವಾಗುವುದು.

ಈ ನಾಗವರ್ಮ ಛಂದಸ್ಸಿಗಿಂತ ಹಿಂದೆ "ಗುಣಕಾಂಕಿತ" ಎಂಬ ಕರ್ಣಾಟಕ ಛಂದಸ್ಸೊಂದಿತ್ತೆಂದು ಸುಮಾರು ೧೦ನೆಯ ಶತಮಾನದಲ್ಲಿ ಬರೆದ ತಮಿಳ್ ಭಾಷೆಯ "ಯಾಪ್ಪರುಂಕಲಕ್ಕಾರಿಕ್ಕೈ" ಎಂಬ ಛಂದೋಗ್ರಂಥದಲ್ಲಿ ಹೇಳಿದೆ. ಪ್ರಾಯಃಶಃ ಈ ಗ್ರಂಥವು "ಗುಣಕ ವಿಜಯಾದಿತ್ಯ" ಎಂಬ ಪೂರ್ವ ಚಾಳುಕ್ಯರಾಜರ ಕಾಲದಲ್ಲಿ ಬರೆಯಲ್ಪಟ್ಟಿರಬಹುದೆಂದು ಊಹಿಸಬಹುದಾದುದರಿಂದ ಈ ಗ್ರಂಥವು ಸುಮಾರು ಕ್ರಿ.ಶ. ೮೪೪ ರಿಂದ ೮೮೭ರ ವರೆಗೆ ಆಳಿದ ಪಶ್ಚಿಮಚಾಳುಕ್ಯರಾಜನಾದ ಗುಣಕ ವಿಜಯಾದಿತ್ಯನ ಕಾಲದಲ್ಲಿ ಹುಟ್ಟಿದುದೆಂದು ಹೇಳಬಹುದು. ಆದುದರಿಂದ ಹತ್ತನೆ ಶತಮಾನದಲ್ಲಿ ಹುಟ್ಟಿದ ಈ ಗ್ರಂಥಕ್ಕಿಂತ ಹಿಂದೆ ಮತ್ತೊಂದು ಕರ್ಣಾಟಕ ಛಂದೋಗ್ರಂಥವಿತ್ತೆಂದು ಹೇಳುವುದಕ್ಕೂ ಅವಕಾಶವಿರುವುದು.

ಪ್ರಕೃತದಲ್ಲಿ ಪ್ರಾಚೀನ ಕಾವ್ಯಗಳಲ್ಲಿರುವ ಛಂದಸ್ಸುಗಳ ಸ್ವರೂಪವನ್ನು ತಿಳಿಯಲು ಈ ಛಂದೋಂಬುಧಿಯಷ್ಟು ಸಹಾಯಕವಾದ ಪ್ರೌಢವಾದ ಛಂದೋಗ್ರಂಥವೊಂದು ಕನ್ನಡದಲ್ಲಿ ಹಿಂದೂ ಇಲ್ಲ—ಮುಂದೆಯೂ ಹುಟ್ಟಲಾರದು ಎಂದು ಹೇಳಿ ಪ್ರಕೃತ ವಿಷಯದಲ್ಲಿ ಲೇಖನಿಗೆ ವಿರಾಮವಿತ್ತಿರುವೆನು.

ಇಂತು ಸಜ್ಜನವಿಧೇಯ,

**ಸಂಪಾದಕ.**

# ವಿಷಯ ಸೂಚಿಕೆ

|| ಶ್ರೀ ||

# ಛಂದೋಂಬುಧಿ

## ಪ್ರಥಮ ನಾಗವರ್ಮ ವಿರಚಿತಂ

# ಪ್ರ ಥ ಮಾ ಧಿ ಕಾ ರ ಂ

---

### ಪೀ ಠಿ ಕೆ

(ವಿಷ್ಣುಸ್ತುತಿ)

ಉ|| ಶ್ರೀವಧುವಂ ಪಯೋಧಿಮಥನೋದ್ಭವವಸ್ತುಸಮೂಹದೊಳ್ ಮಹಾ |
[1]ದೇವಸಮೇತರಿರ್ದಸುರರುಂ ಸುರರುಂ ಕುಡೆ [2]ತನ್ನ ಮೆಚ್ಚಿಗೊಂ ||
ಡಾವನಶೇಷಭೂಭುವನಮಂಡಲವಲ್ಲಭ[3]ನಾದ ದೇವನೀ |
ಗಾವಗಮೆಮ್ಮ ಬೇಳ್ಪ[4]ವರಮಂ ದಯೆಯಿಂ ಸುಕವೀಂದ್ರವಲ್ಲಭಂ ||೧||

(ಅರ್ಧನಾರೀಶ್ವರಸ್ತುತಿ)

ಚಂ|| ಜಡೆಗಳ ಬಂಬಲೊಪ್ಪುವಲಕಾವಳಿ[5]ಭೀಷಣಮಪ್ಪ ಪಾವಿನೊ |
ಳ್ದುಡುಗೆ ಪೊದಟ್ಟಿ ಪೊಂದುಡುಗೆ ಶಕ್ತಿ[6]ವಿರಾಜಿತಶಕ್ತಿ ಶೂಲಮೊ ||
ಳ್ಪಿಡಿದ ಕರಾಸಿ ಗೌರಿನಿಜ[7]ವಲ್ಲಭೆಯಾಗಿರೆ ಮಿಕ್ಕ ನಾಕಿ ಸ |
ಯ್ಯಡಿಯ ಪಿನಾಕಿ ಕೂರ್ತು ಸಮಗೀಗೆ ವರಂಗಳನುತ್ಸವಂ[8]ಗಳಂ ||೨||

(ಗಣನಾಯಕಸ್ತುತಿ)

ಚಂ|| ಸಕಲಕಲಾಗಮಾಭರಣ ನೀಶ್ವರ[9]ಸೂನು ಸಮಸ್ತವಸ್ತುರೂ |
ಪಕನಕಲಂಕನಭ್ಯುದಯಕಾರಣವಾರಣವಕ್ತ್ರನಾಪ್ತಲೌ ||
ಕಿಕಮತನನ್ವಿತಾಗಮಪದಾರ್ಥಪರಂಪರನಾದನಾ ವಿನಾ |
ಯಕ [10]ಗಣನಾಯಕಂ ಕೃತಿಗೆ ನಾಯಕ[11]ನಕ್ಕೆ ನೆಗಳ್ತೆಗ್ಗೋಜ[12]ನಾ ||೩||

(ಅಂಬಿಕಾಸ್ತುತಿ)

ಚಂ|| ನಗೆಮೊಗಮಂ ಪೊದಟ್ಟಿ ಪೊಸಜವ್ವನಮಂ ಮಿಗಿಲಪ್ಪ ಕೆಂಗಾಡಿಯಂ |
ಸೊಗಯಿಪ ಮುದ್ದುಗೆಯ್ತುಮನೊಱಲ್ದಿನಿಸಂ ಮನವಾಱೆ ನೋಡಿ ತೊ ||
ಟ್ಟಗೆ ಕೊಳೆ ಮೇಲೆವಾಯ್ದು ಮಹಿಷಾಸುರನಂ ತವೆ ಕೊಂದಳಾವಳಾ |
ಭಗವತಿ ಕೂರ್ತು ಬೀರಸಿರಿ[13]ಯಿಾಗೆ ಭುಜಾಸಿಗೆ ನಾಗವರ್ಮನಾ ||೪||

---

(1) ದೇವನನಜಸ್ರಮಿರ್ದಸುರರಾ, (2) ತಾನೆ, (3) ನಾದನಾತನೀ (ಎಂದಿರಬಹುದು), (4) ವರದುನ್ನತಿಯಂ, (5) ಭೂಷಣ, (6) ವಿರಾಜಿಪ, (7) ವಲ್ಲಭನಾ (8) ಗಳಿಂ, (9) ಭಕ್ತ, (10) ಕವಿನಾಯಕ, (12) ನಾಗೆ, (12) ನಂ, (13) ಯಕ್ಕೆ.

(ಸೂರ್ಯಸ್ತುತಿ)

ಚಂ|| ಒದವಿದ [1]ಕೈರವಂ ಮುಗಿಯೆ ಧಾರಿಣಿ[2]ಯೊಳ್ ಕಡುಮಂದಮಾಗಿ [3]ಪ|
ರ್ವಿದ ತಮಮೆಲ್ಲಮೋಸಂಸೆ ತನ್ನನೆ ಕೀರ್ತಿಪ ಶಿಷ್ಯಕೋಟಿಗ||
ಭ್ಯುದಯವರಂಗಳಂ ನಿಜಕರಂ ದಯೆಗೆಯ್ದಿರೆ ತಾನೆ ದೇವನಾ|
ದುದಯದಿವಾಕರಂ ಕರಮಲರ್ಚುಗೆ ನಮ್ಮ ಮುಖಾರವಿಂದಮಂ ||೫||

(ಸರಸ್ವತೀಸ್ತುತಿ)

ಚ|| ಅತಿಮಧುರ[4]ಪ್ರಸನ್ನಪರಿಪೂರ್ಣ [5]ರಸೋಚಿತ ರಂಜಿತಾರ್ಥಸಂ|
ಯುತೆ ಸಕಲಾಗ[6]ಮೋಕ್ತಿಯುತ ಲಕ್ಷಣಲಕ್ಷ್ಯಸಮಸ್ತವಸ್ತುಸಂ||
[7]ಯುತೆ[8]ಸರಸೀಜಗರ್ಭನ ಮುಖಾಂಬುಜದಿಂದಮಗಲ್ದು ಬಂದು [9]ಭಾ|
ರತಿ ನೆಲಸಿರ್ಕೆ ಕೂರ್ತು ಮುಖಪಂಕಜದೊಳ್ [10]ಕವಿನಾಗವರ್ಮನಾ ||೬ ‡||

(ಸ್ವಕವಿತ್ವಪ್ರಶಂಸೆ)

ಚಂ|| [11]ರಚಿತಪದಪ್ರಸನ್ನಪರಿಪೂರ್ಣರಸೋಚಿತಮರ್ಥಮಾ|
ಗುಚಿತ ಪುರಾಣ[12]ಮಾರ್ಗ ಪದಪದ್ಧತಿಬಂಧುರಬಂಧಮೆಂಬಿನಂ||
ರಚಿಯಿಸೆ ವಾಚ್ಯವಾಚಕ ವಿಶೇಷ್ಯವಿಶೇಷಣ ಲಕ್ಷ್ಯಲಕ್ಷಣ|
ಪ್ರಚುರತೆ ಕಾಳಿದಾಸನುಮನೇಳಿಸಿತೀಕೃತಿನಾಗವರ್ಮನಾ ||೭||

ಕಂ|| ಬಲ್ಲರ ಬಗೆಯಿಂ [13]ಕಲ್ತುದ|
ನೆಲ್ಲಮನೇಗೊಂಡೊಡಲ್ದು ಪೇಟಲ್ಕೀತಂ||
ಬಲ್ಲನೆನಲ್ಕೆಅವಿಕ್ಕಿದ|
ಬೆಲ್ಲದವೊಲಪೂರ್ವಮಾಗೆ ಪೇಟ್ದಂ ಕೃತಿಯಂ ||೮||

ಕರ[14]ಮರ್ಥಾಕರಮುಚಿತಾ|
ಕ್ಷರಮವಲಂಬಪ್ರಸನ್ನಮತಿಮಧುರಮಲಂ||
ಕರಣಯುತಮೆನಿಸಿ ಪೇಟಲ್|
ಧರೆಯೊಳ್ ಕವಿರಾಜಹಂಸನೊರ್ವನೆ ಬಲ್ಲಂ ||೯||

---

(1) ಕೌಮುದಂ, (2) ಯಂ, (3) ಪರ್ಚಿದ, (4) ಪ್ರಸನ್ನೆ, (5) ರಸೋಚಿತೆ, (6) ಮೋಕ (7) ಯುಕ್ತೆ, (8) ಕಮಲಾಗನಾನನದೊಳಿರ್ದು ಮಗುಟ್ದಿಮಗೊಲ್ದುಬಂದು,(9) ವಾಕ್ಸತಿ, (10) ಕವಿರಾಜಹಂಸನಾ, (11) ರಚಿತಪದಪ್ರಪೂರ್ಣತೆ ಗಭೀರರಸಾವಹಮರ್ಥಯುಕ್ತವಾ। ಗುಚಿತಪುರಾಣಮಾರ್ಗಪ......ಬಿವಂ, (12) ಪೂರ್ವ, (13) ಕೇಳ್ದವರೆಲ್ಲಂ ಕೆಯ್ಕೊಂಡೊಡಲ್ದು ಕೇಳ್ದಿಂತೀತಂ, ಕಲ್ತುವನೆಲ್ಲಂ ಕೆಯ್ಕೊಂಡೊ, (14) ಮಸ್ತಾಕ್ಷರ.

‡ ಮಿ|| ಕಿಟ್ಟೆಲ್ ಸಾಹೇಬರ ಮುದ್ರಣವು ಈ ಪದ್ಯದಿಂದ ಆರಂಭವಾಗಿದೆ.

ಕಂ|| [1] ಪ್ರಾಸಾನುಪ್ರಾಸಕ್ಕದು |
ಲೇಸಾಗೆ ಪೆಸರ್ಕ್ಕಡಂಗಿ ಕನ್ನಡದಿಂ ವೇ ||
ಟ್ಸಾಸುಕರಕವಿಯ ಬಲ್ಮೆಯ |
ನಾಸುಕವಿಪ್ರಕರಮಱಿದು ಮಚ್ಚುಗುವುಲ್ತೇ ||೧೦||

(ಗ್ರಂಥವನ್ನು ಬರೆಯಲು ಕಾರಣ)

ಚಂ|| ನವರಸಮುಣ್ಮೆ ಮಾತು ಪೊಸತಾಗಿರೆ ದೇಸಿಯೆ ದೇಸೆವೆತ್ತುದೆಂ |
ಬವೊಲಿರೆ ಜಾಣ್ ಮನಂಗೊಳಿಸೆ ಪೊಣ್ದಿರದರ್ಥಕೃತಿಪ್ರಬಂಧಮಂ ||
ಕಿವಿಗಿನಿದಾಗೆ ಪೊಚ್ಚಪೊಸತಾಗಿ ಮನೋಹರಮಾಗೆ ಪೇೞ ಸ |
ತ್ಕವಿ [2]ಕವಿರಾಜಹಂಸ ಎನೆ ಪೇೞಲೊಡರ್ಚಿದೆನೀಪ್ರಬಂಧಮಂ ||೧೧||

(ಕವಿಯ ವಂಶಾದಿವರ್ಣನಂ)

ಕಂ|| ಜಗದೊಳಗಿದೊಂದು ಮಿಗಿಲೆನೆ |
[3]ನೆಗೞ್ದಪುದು ವೆಂಗಿವಿಷಯಮಾವಿಷಯದೊ[4]ಳೊ ||
ಳ್ಪಗಣಿತಮೆನೆ ಸಪ್ತಗ್ರಾ |
ಮಗಳೊಳಮಾ ವೆಂಗಿಪೞು ಕರಂ ಸೊಗಯಿಸುಗುಂ || ೧೨ ||

ಕಂ|| ಆವೆಂಗಿಪೞುವಿನೊಳ್ ವಿಭು |
ದೇವಸಮಾನಂ ವಿದಗ್ಧನಂಬುಜಭವನಂ ||
ತಾವಗ[5]ಮೊಳ್ಗುಣನಿಧಿಯೆಂ |
ದೀವಸುಧೆಯೊಳೆನಿಸಿ ವೆಣ್ಣಮಯ್ಯಂ ನೆಗೞ್ದಂ ||೧೩||

[6]ವೇದದೊಳನುಗತರೆನಿಸುವ |
[7]ವೇದಿಗಳೊಳ್ ನಿಪುಣನಾಗಿ ನೆಗೞ್ದಂ ಗಂಭೀ ||
ರೋದನ್ವತ್ಪರಿವೇಷ್ಟಿತ |
ಮೇದಿನಿಯೊಳ್ ವೆಣ್ಣಮಯ್ಯ ನಕಲಂಕಗುಣಂ ||೧೪||

---

(1) ಪ್ರಾಸಾನುಪ್ರಾಸಂಗಳ ಲೇಸಾಗಿರೆಸುಕ್ಕಡಂಗಿ... ಟ್ಸಾಸುಕವಿಯನಾಶುಕವಿಯ, ಪ್ರಾಸಾನುಪ್ರಾಸಕ್ಕದು ಲೇಸಾಗಿ ಪೆಸರ್ಕಡಂಗೆ ಪೇೞ್ದಾಸೂರಕರವಿಲಯಕ್ಕೆಯನಾಸುರಕವಿಯ ಬಲ್ಮೆಯನಾ, (2) ವರರಾಜ, (3) ನೆಗೞ್ದಾದುರ್ದು, (4) ಳಾಳ್ಪಗಣಿತ, (5) ಮೊಳ್ಗಿನ, ಮೊಳ್ಪಿನ, (6) ವಾದಿಪೊಳಗಣಿತರೆನಿಸುವ, (7) ಮೇದಿನಿಯೊಳ್ ನಿಪುಣನೆನಿಸಿನೆಗೞ್ ವೈರಿಗೊಲ್ದಾರೋದೊನ್ನತಪರ್ಷ

ಕಂ|| ಸಕಲಜ್ಞಾನ[1]ನನಿಂದಿತ |
ಸುಕರಗುಣಾವಿಃಪ್ರಭವಮನೋಭವ[2]ರೂಪಾ |
ಭಿಕ ನಂಬುಜಸಂಭವಮೂ ||
ರ್ತಿ ಕರಂ ಕೌಂಡಿನ್ಯಗೋತ್ರನನುಪಮಚರಿತಂ ||೧೫||

ವಿಶ್ರುತಯಶಂಗಾ ವಿಪ್ರಂ |
ಗೆ[3] ಕ್ಷತ್ರಿಯಸಭಾಜಿತ ದ್ವಿಜನ್ಮಂಗೆ ಗುಣಾ ||
ನ್ವಿತೆ ಸತಿ ಸಜ್ಜನಿಕೆಗರುಂ |
ಧತಿಗೆ ಮಿಗಿಲ್ ಕೌಂಡಿಕಬ್ಬೆಯೆಂಬಳ್ ಪೆಸರಿಂ ||೧೬||

ಆಕೌಂಡಿಕಬ್ಬೆಗಂ ಮಹಿ |
ಮಾಕರನೆನೆ ನೆಗಳ್ದ ವೆಣ್ಣಮಯ್ಯಂಗಮನಂ ||
[4]ಗಾಕಾರನಾಗಿ ಪುಟ್ಟಿಯೆ |
ಲೋಕಸ್ತುತನಾಗಿ ದಾಮಮಯ್ಯಂ ನೆಗಳ್ದಂ ||೧೭||

ಆತನ ಕುಲವನಿತೆ ಜಗ |
ತ್ಖ್ಯಾತಗುಣವ್ರಾತೆ ರೂಪಲಾವಣ್ಯರಸೋ ||
ಪೇತೆ [5]ಗುರುಜಾಯೆಗಂ ಮಿಗಿ |
ಲೇತಱೊಳಂ ಕುಂದಕಬ್ಬೆಯೆಂಬಳ್ ಪೆಸರಿಂ ||೧೮||

ಎನೆ ನೆಗಳ್ದ ಕುಂದಕಬ್ಬೆಗ |
ಮನಿಂದ್ಯಗುಣನೆನಿಪ ದಾಮಮಯ್ಯಂಗಂ ಭೂ ||
ವಿನುತಯಶಂ ದ್ವಿಜವಂದ್ಯಂ |
ಮನುಮಾರ್ಗಂ ವೆಣ್ಣಮಯ್ಯ ನಗ್ರತನೂಜಂ ||೧೯||

ಶ್ರೀಕಾಂತಾಪತಿ ಸಕಲಕ |
ಲಾಕೋವಿದನ ದ್ವಿತೀಯ ನತುಲಚರಿತ್ರಂ ||
ಲೌಕಿಕ ವೈದಿಕಶಾಸ್ತ್ರ[6]ವಿ |
ವೇಕಿ ಕಲಾಭಿಜ್ಞನೆನಿಸಿ ನೆಗಳ್ದಂ ಧರೆಯೊಳ್ ||೨೦||

(1) ವಿನಿಂದಿತ......ಪ್ರಭವನಾಮನೋ... ..ಗೋತ್ರಮಂಗಳಚರಿತಂ, (2) ರೂಪಾಧಿಕ (3) ಕ್ಷತ್ರಿಯಸಂಭವೆಂ ದ್ವಿ (4) ಸಾಕಾರ, (5) ಗುರುಜಾತೆ, ಗಿರಿಜಾತೆಗಂ, (6) ವಿವೇಕ, ಸಾಹೀ [illegible] ನೆಗಳ್ದ ಚತುರಸ್ರಗುಣಂ,

ಕಂ|| ಅಂತೆನಿಪ ವೆಣ್ಣಮಯ್ಯನ |
ಕಾಂತೆ [1]ಗುಣವ್ರಾತೆ ಧರಣಿಸುತೆಗಂ ಮಿಗಿಲೆಂ ||
[2]ಬಂತೊದವಿದ ಪತಿಭಕ್ತಿಯ |
ನಾಂತೆಸೆವಳ್ [3]ಪೋಟಿಕಬ್ಬೆಯೆಂಬವಳ್ ಪೆಸರಿಂ ||೨೧||

[4]ಆ ಪೋಟಿಕಬ್ಬೆಗಂ ವಿ |
ದ್ಯಾಪರಿಣತನೆನಿಪ ವೆಣ್ಣಮಯ್ಯಂಗಂ ವಾ ||
ಕ್ಛ್ರೀಪತಿ [5]ಸತ್ಕವಿತತ್ತ್ವಗು |
ಣೋಪೇತಂ **ನಾಗವರ್ಮ**ನಗ್ರತನೂಜಂ ||೨೨||

ಮ||ಸ್ರ|| ಹರಹಾಸಕ್ಕೊಂದೆರಡ್ ದಿಕ್ಕರಿ[6]ರದನಕೆರಡ್ಮೂಱು ನಾಕಾಧಿನಾಥ |
ದ್ವಿರದಕ್ಕಂ ಮೂಱುನಾಲ್ಕಿಂದುವಿನ ರುಚಿಗೆ ನಾಲ್ಕಯ್ದು ದುಗ್ಧಾಬ್ಧಿಗಯ್ದಾ ||
ಱರವಿಂದಕ್ಕತ್ತಲಾಱೇೞಮರನದಿಗಮೇೞೆಂಟು ಕೈಲಾಸ ಧಾತ್ರೀ |
ಧರಕೆಂಟೊಂಬತ್ತು [7]ಮೇಲಾಯ್ತೆನೆ ಪಸರಿಸಿದಂ ಕೀರ್ತಿಯಂ **ನಾಗವರ್ಮಂ**||೨೩||

ಮಂದಾ|| ಕುಂತೀಪುತ್ರಂ ಪೊಣರ್ದ ರಣದೊಳ್ ಪದ್ಮಜಂ ಶಾಸ್ತ್ರದೊಳ್ ಶ್ರೀ |
ಕಾಂತಂ [8]ಮತ್ತಂ ಪಿರಿಯಸಿರಿಯೊಳ್ ಸಿಂಧುಜಂ ಶೌಚದೊಳ್ ಕ ||
ರ್ಣಂ ತಪ್ಪಿಲ್ಲೆಂದೆನಿಪ ನುಡಿಯೊಳ್ ವಿಕ್ರಮಾದಿತ್ಯ[9]ನಂ ತೋ |
ರಂತಾಂತೌದಾರತೆಯೊಳೆಸೆದಂ [10]**ಕಂದಕಂದರ್ಪನೆಂದುಂ** ||೨೪||

ಮ|| ತನುವಿಂದೊಂದು ಗುಣಂಗಳಿಂದೆರಡು ಸಾಹಿತ್ಯಂಗಳಿಂ ಮೂಱು [11]ಸ |
ನ್ಮನದಿಂ ನಾಲ್ಕುಮಳತ್ವ[12]ದಯ್ದು ವಿಲಸಚ್ಚಾರಿತ್ರದಿಂದಾಱು ಸ ||
ಜ್ಜನವಿಂದೇೞು ಸುತತ್ತ್ವದಿಂದೆ ತಳರ್ದೆಂಟೆಂಗಂ ಭುಜದ್ವಂದ್ವದೊಳ್ |
ತನಗಿನ್ನಾರ್ ಸರಿ ನಾಗ[13]ವರ್ಮಕೃತಿಗೆಂದಂ ಕಾಳಿದಾಸಂಬರಂ ||೨೫||

---

(1) ಗುಣಾಕ್ರಾಂತೆ,ಗುಣಖ್ಯಾತೆ, (2) ಬಂತಿರ್ಪಳ್, (3) ಪೋತಿಕಬ್ಬೆ, (4) ಆಕೆಯ ನಿಜಕಾಂತನು ಮಹಿ। ಮಾಕರನೆಂದೆನಿಪವೆಣ್ಣಮಯ್ಯಂ ವಾ॥ ಕ್ಛ್ರೀಕಮನೀಯಂ ತತ್ವಗುಣಾಕರನೆನೆ ನಾಗ, (5) ಸತ್ಕವಿ ಮುಖ್ಯಗುಣೋಪೇತಂ, ಕವಿಕವಿಮುಖ್ಯ, (6) ರದನಿಗೆ, (7) ಮೇಲಾಗಿರೆ, (8) ಮುನ್ನಂ, (9) ನಾತೋರ್ರಂತಾರ್ತೀನೌದಾ, (10) ಭೂಮಿಕಂದರ್ಪ, (11) ಸಮ್ಮುದದಿಂ, (12) ದಯ್ದೆನಸುಱಾಂ, (13) ವರ್ಮನಿಗೆ ದಾಸಂ ಕಾಳಿಧಾಸಂ ಪಲಂ,

ಮ|| ಮತಿವಂತರ್ [1]ಸಮನೆಂಬೊಡಾವೆಡೆಯೊಳಂ ಮತ್ತೊರ್ವರಿಲ್ಲಬ್ಧಿ ವೇ |
ಷ್ಟಿತಭೂಚಕ್ರದೊಳೆಂತು ಮೇರು[2]ಗಿರಿಗಂ ಮತ್ತೊಂದು ಶೈಲೇಂದ್ರಮು ||
ನ್ನತಮಿಲ್ಲಂ [3]ತುಟಿ ನಾಕಿಗಂಗೆನುತುಮಾ ಮತ್ತೇಭವಿಕ್ರೀಡಿತಂ |
ಪ್ರತಿ[4]ಯೆಂದಿಂತು ತಗುಳ್ದು ಕೊಂಡುಕೊನೆಗುಂ ವಿಶ್ವಂಭರಾಮಂಡಲಂ ||೨೬||

ಕಂ|| ಅರಸಂ ರಕ್ಕಸಗಂಗಂ |
ಗುರುಗಳ್ [5]ನೆಗಲ್ದಜಿತಸೇನ ಪಂಡಿತದೇವರ್ ||
ಪೊರೆದ ನೃಪ[6]ನಣ್ಣನೆನೆ ಮ |
ಚ್ಚರಿಸುವರಾರ್ ನಾಕಿಯಿರುಳೊಳೇಂ ಪುಟ್ಟದನೇ ||೨೭||

[7]ಗಂಡರ ಮೂಗುತಿಯೆನಿಸಿದ |
ಮಂಡಳಿಕರ ಮಂತ್ರಿ ಸಂಧಿವಿಗ್ರಹಿ ರಾಯಂ ||
ಕೊಂಡಾಡಿ ಪೊರೆದನೆನೆ ಧರೆ |
ಕೊಂಡಾಡದೆ? ಕೊಂಡುಕೊನೆಯದೇ? ನಾಕಿಗನಂ ||೨೮||

ಎನೆ ನೆಗಲ್ದ ನಾಗವರ್ಮಂ |
[8]ವಿನುತಾತಿವಿಶಿಷ್ಟ ಸೇವ್ಯನಂಗಜರೂಪಂ ||
ಜನನುತನಶೇಷ ವಿದ್ವ |
[9]ಜ್ಜನಹಿತಮಂ ಛಂದಮಂ ಮನಂಗೊಳೆ ಸೇಲ್ದ ||೨೯||*

---

(1) ಸಮನೆಂಬರೇವೆಡೆಯೊಳಂ, ಸಮುದೆಂಬುದಾವುದದಱೊಳ್ ಮತ್ತೊಂದುಮಿಲ್ಲಬ್ಧಿ, ಪಡುನೆಂಬೊಡಾವೆಡೆ, (2) ಗಿರಿವೊಲ್, (3) ತೆನೆ, (4) ಯಿಂದಿಂತು, ವಸ್ತೂಪಮೆಯುಂ ತಗುಳ್ದು ಪೊಗಳ್ದುಂ, ಯಿಲ್ಲೆಂದು, (5) ಪೇೞ್...ಸೇನಪಂಡಿತದೇವರ್, ನೆಗಲ್ದಜಿತ ವೀರಸೇನರ್ ದಯೆಯಿಂ, (6) ನಣುಗನೆನೆ, (7) ಗಂಡರ ವಿಮುಕ್ತ, (8) ವಿನತಾರಿ ನಷ್ಟಪಾಪ, (9) ಜನಸಹಿತಂ ಛಂದಮಂ ವಿರಾಜಿಸೆ,

*ಇಲ್ಲಿ ಈ ಪದ್ಯಗಳಿವೆ—

ಕಂ|| ಛಂಡಗವಿ ಬಣಗುಗವಿಗಳ । ಕೊಂಡುಂ ಕೊನೆದೂಳುತಿರ್ಪ ಕುಕವಿಗಳಂ ತಾಂ ||
ತೊಂಡರೆನೆ ಸರಿಯೆನಿಪ್ಪನೆ । ಚಂಡಾಲರ [10]ನೋಡಿ ನಗುವ ಕವೀಂದ್ರಂ || ||೧||

ಮ|| ವಿಪರೀತಂ ಬರೆಯುತ್ತುಮೊಂದನಱುವೃತ್ತುಂ ಗದ್ಯಮುಂ ಮಾಡಿ ವ ।
ಸ್ತುಪದ ಪ್ರಸ್ತುತಮಾಗೆ ಮಾಣದೆ ತಗಳ್ದೋದುತ್ತೆ ತಾಂ[11] ಬೋಡು ಗ||
ಳ್ಗಿಪಗಲ್ ಕೆಯ್ಕೊಳೆ ದಾಯಮುಗ್ಗಡಿಸುತುಂ ವಿದ್ವಜ್ಜನಂ ಮೆಚ್ಚೆ ಬ ।
ಣ್ಣಿಪಿನಂ ಬಲ್ಲೊಡೆ ಸತ್ಕವೀಂದ್ರರೆನಿಪರ್ ಬಲ್ಲರ್ ಪೆಱರ್ ಬಲ್ಲರೇ

(10) ನಾಗವರ್ಮ ನಗುವಂತಿರ್ಪಂ, (11) ಜೂದು,

(ಛಂದಶ್ಶಾಸ್ತ್ರಪ್ರಸರ)

*ಕಂ|| ಇಂದುಧರನುಮೆಗೆ ಪೇಳ್ದಾ |
ಛಂದಂ ಪಿಂಗಳನಿ ನವನಿ[1]ಯೊಳ್ ಪರೆಪಿದೊಡಾ ||
ಛಂದೋಂಬು ರಾಶಿಯೊಳ್ [2]ಮೊಗೆ |
ತಂದುದನಂಗನೆಗೆ ನಾಗವರ್ಮಂ ಪೇಳ್ದಂ ||೩೦||

ವಿಧುಬಿಂಬಾನನೆ ಛಂದೋಂ |
ಬುಧಿ ಯೆಂಬುದಿದೆನ್ನ ಪೆಸರ ಛಂದವಿದಂ ಕೇಳ್ ||
ಬುಧಸಮಿತಿ [3]ಮಚ್ಚೆ ಪೇಳ್ವೆಂ |
ಮಧುರ ರಸಪ್ರಚುರ ವಚನರಚನೆಗಳಿಂದಂ ||೩೧||

(ಗಣಗಳು)

ಕಂ|| ಒಗೆದುವು ಮ ಯ ರ ಸ ತ ಭ ಜ ನ |
ಲ ಗಾಕ್ಷರಂ ಕೌಸ್ತುಭಾದಿ ನಾನಾವಿಧ ವ ||
ಸ್ತುಗಳುಂ ಪಯೋಂಬುರಾಶಿಯೊ |
ಳೊಗೆವಂತಿರೆ ಚಂದ್ರವದನೆ ಛಂದೋಂಬುಧಿಯೊಳ್ ||೩೨||

---

(1) ಗಂ ಪರಪೆ ತಾಂ, (2) ಕಲ್ತಂದನುನಾಕ್ಷೀಯಸತಿಗೆ, ಕಲಿತಂದದೆ ನಿಜಸತಿಗೆ ನಾಗವರ್ಮ, (3) ಗೞಾಯೆ,

*ಇಲ್ಲಿ ಈ ಪದ್ಯಗಳು ಕೆಲವು ಪ್ರತಿಗಳಲ್ಲಿವೆ—

ಕಂ|| ಛಂದಮನರಿ[4]ಯದೆ ಕವಿತೆಯ |
ದಂದುಗದೊಳ್ [5]ನುಡಿವ ಕುಕವಿಯೆ ಕುರುಡಂ ||
ಮುಂದೆ ಕವ[6]ಲ್ವಟ್ಟೆಯಿರ |
ಲ್ಕೆಂದುಮಣಂ ಮುಂದೆ ಪದಮನಿಡಲಱಿಯದಪನೇ || ||೧||

ಮುಱಿಯಿಲ್ಲದೆ ಪೊಯ್ಸ್ಕಾರಿಂ | (ಇದು ಧರ್ಮಾಮೃತದಲ್ಲಿದೆ) ||೨||
ಮಾನಿತಪದಮಂ ಪದೆಸಂ |
ಧಾನಮನರ್ಥಪ್ರತೀತಿಯಂ ಕವಿಹೃದಯ ||
ಸ್ಥಾನಮನಱಿದೋವದೆ ಕೆ |
ಟ್ಟೇನೆಯ ಕರಡಿಯವೊಲಱುಚುವಂ ವಾಚಕನೇ ||೩||

ಹಱಿಗವಿಗಳ ಕಬ್ಬಂಗಳ | (ಈ ಕಂದವು ಗಿರಿಜಾಕಲ್ಯಾಣದಲ್ಲಿದೆ) ||೪
ಜಗಕೀಛಂದದ ಬಲ್ಮೆಗೆ |
ಮಿಗಿಲೆನಿಪೊಡೆ ಚಂದಮೆನಿಸಿ ಬುಧಜನದ ಮನಂ ||
ಬುಗುವಂತಿರೆ ಪೇಳ್ದ[7]ನೆನಲ್ |
ನಗುವವಱಗಬ್ಬಿಗರವಂದಿರೇಂ ಸೊರ್ಕಿದರೋ ||೫||

(4) ಯದ, (5) ಸುಱಿವ, (6) ಲ್ವಟ್ಟೆಯತ್ತೊದಂವೆಮ. (7) ಬಱಿಕ್ಕೆ ಗುಣ್ಪಿನಿಂ ಪೇಳ್ವ ನೆಂಬವಂಗೆ.

(ಗುರುಲಘುಗಳ ಚಿಹ್ನೆ)

ಕಂ|| ಬರೆದಯ್ದಱ ಲೆಕ್ಕಮನಾ |
ದರದಿಂ ಗುರುಲಘು ವಿಭೇದಮಂ ಭಾವಿಸು ನೀಂ ||
ಗುರು[1] ಪಿಂತೆ ಕೊಂಕಿ ತೋರ್ಪುದು |
ಬರೆ ಮುಂತಣ ನೈತನಪ್ಪ ಬರೆ ಲಘು ಕೆಳದೀ ||೩೩||

(ಲಘುವು ಗುರುವಾಗುವುದು)

ಕಂ|| ಗುರುವಕ್ಕುಂ [2]ಮುಂ ದಡ್ಡ |
ಕ್ಕರಮಾಗಿರೆ ಪಿಂತೆ ನಿಂದ ನೈತ್ರ(ಯು)ಕ್ಕರಮುಂ ||
ಗುರುವೊತ್ತುಗಳಿಂದಪ್ಪುದು |
[3]ನಿರಂತರಂ ಪ್ರವೃತ್ತಪೀವರಸ್ತನಯುಗಳೇ ||೩೪||
ಬಿಂದು ವಿಸರ್ಗಂ ವ್ಯಂಜನ |
ಮೊಂದಿದ ದಡ್ಡಕ್ಕರಂ ಪದಾಂತ್ಯಂ ದೀರ್ಘಂ ||
ಬಂದೊಡಱಿ ವನಜಮುಖಿ ಗುರು |
ವೆಂದುಂ[4] ಸಯ್ಯಡಿಯ ನಾಗವರ್ಮನ ಮತದಿಂ ||೩೫||

(ಗುರುಲಘುಗಳ ಸಂಜ್ಞೆ ಮತ್ತು ಗಣಾಕ್ಷರಗಳು)

ಕಂ|| ನಯದಿಂ ಗುರುವೆಂಬುದು ಕೇಳ್ |
ತ್ರಿಯಂಬಕಂ ಲಘು ಮುರಾಂತಕಂ ಮೃಗನಯನೇ ||
ಮ ಯ ರ ಸ ತ ಜ ಭ ನ ಲ ಗ [5]ವಿನಿ |
ಚಯ ಮೆಂಬಿವು ನಿಯಮದಿಂ ಗಣಾಕ್ಷರಮಕ್ಕುಂ ||೩೬||

(ಅಕ್ಷರಗಣಗಳ ಹೆಸರು ಮತ್ತು ಸಂಖ್ಯೆ)

ಕಂ|| ಗುರು ಲಘುಮಿಶ್ರಂ ಮೂಱ |
ಕ್ಕರದಿಂ ಗಣಮಿಡು ಲತಾಂಗಿ ಬರೆದೆಂಟು[6]ಗಣಂ ||
ಧರಣಿ ಜಲಾಗ್ನಿ ಮರುದ್ವ್ಯೋ |
ಮ ರವಿ ಶಶಾಂಕೇಂದ್ರನಿಲಯಮಿವು [7]ಗಣನಾಮಂ ||೩೭||

(1) ಮುಂತೆಕೊಂಕಿ ತೋಱುವ ಬರೆ ಪಿಂತಣ। ಮುಂತಣನೈತದೊಪ್ಪಮಿರೆ. (2) ಮುಂತೊತ್ತಕ್ಕರ ಮಾಗಲ್, (3) ಪರಮಾರ್ಥಂ ಪೀನಪೀವರಸ್ತನಯುಗಳೇ, (4) ಲಘುವೆಂದು ನಾಗವರ್ಮ ಕವೀಂದ್ರಂ, (5) ಗಳ, ಲಿಪಿ, (6) ವರಂ, (7) ಗಣದ ಪೆಸರ್.

ಮ|| ಗುರು ಮೂಱಾಗಿರೆ ಧಾತ್ರಿ ಮುನ್ನೆರಡು ಬಿಣ್ಪಿಂ ತೋಯಮಾದ್ಯನ್ತದೊಳ್|
ಬರೆ ವಕ್ರಂ ಶಿಖಿಯೊಂದು ಕೊಂಕು ಕಡೆಯಿಂದಾ ಮಾರುತಂ ವ್ಯೋಮಮೊ ||
ಪ್ಪಿರೆ ಬಿಣ್ಪಿಂತೆರಡಾದಿಯೊಳ್ ನಡುವೆ ಕೊಂಕಾದಿತ್ಯ ನಬ್ಜಾರಿ ತ|
ಳ್ತಿರೆ ವಕ್ರಂ ಮೊದಲಲ್ಲಿ ಮೂಱು ಲಘುವಿಂ[1]ನಾಕಂ ವಿಲೋಲೇಕ್ಷಣೇ ||೩೭||*

(ಪ್ರಸ್ತಾರ ಲಕ್ಷಣ)

ಕಂ|| ಮೂಱುಗುರುವಿಟ್ಟು ಮೊದಲೊಳ್ |
ತೋಱರೆ ಲಘು ಮುಂತೆ ಪಿಂತೆ ಸಮನಾದಿಯ ಬಿ ||
ಣ್ಪೇಱಸುಗುಂ ಲಘುವಂ ಮಿಗ |
ಲಾಱವು ಗುರು ಪಿಂತೆ ಮುಂತೆ ಸಮನೆಂಟುವರಂ ||೩೮||

(ಮತ್ತೊಂದುಬಗೆಯ ಗಣಪ್ರಸ್ತಾರ ಲಕ್ಷಣ)

ಕಂ|| ಗುರುವಿನಡಿ ಮೊದಲೆ ಲಘುವಂ |
ಬರೆ ಮುಂತಂ ಕೂಡೆ ತತ್ಸಮಂ ಬರೆ ಪಿಂತಂ ||
ಗುರುವಿಂದೆ ತೀವು ಮತ್ತಂ |
[2]ದೊರೆಯಲ್ ತಾನೆಯ್ದೆ ಸರ್ವಲಘುವಪ್ಪಿನೆಗಂ ||೩೯||

(ಮತ್ತೊಂದುಬಗೆಯಲ್ಲಿ ಗಣಪ್ರಸ್ತಾರ ಲಕ್ಷಣ)

ಮ|| ಗುರುವೊಂದಂ ಲಘುವೊಂದ ನೆಂಟುವರೆಗಂ ಪ್ರಸ್ತಾರಿಸಂತಾದಿಯೊಳ್ |
ಗುರುಯುಗ್ಮಂ ಲಘುಯುಗ್ಮಮುಂ ಬರೆ ಚತುಸ್ಸ್ಥ[3]ನಂಬರಂ ಮಧ್ಯದೊಳ್ ||
ಗುರುನಾಲ್ಕುಂ ಲಘುನಾಲ್ಕು ಮೆಯ್ದೆ ಬರೆ ನೀನಂತ್ಯಂಗಳೊಳ್ [4]ಸಂತತಂ |
ನಿರವದ್ಯೋನ್ನತಚಾರು ಪೀವರಕುಚೇ ಪ್ರಸ್ತಾರಮಿಂತೀಕ್ರಮಂ ||೪೦||

---

(1) ಮಘವಂ ಲೋಲೇ, (2) ದೊರೆಯುದಿಂದಿಯ್ದು, (3) ನಂಗಳೊಳ್, (4) ಬಲ್ಲವಂ

*ಮ|| ಸಿರದೊಳ್ ದೇವ, ಲಲಾಟದೊಳ್ ದಿನಕರಂ, ನೇತ್ರಂ[5]ಗಳೊಳ್ ತೋಯಮುಂ ।
ಬರ ಕರ್ಣಂಗಳೊಳಿಂದು ದಂತನಿಚಯಸ್ಥಾನಂಗಳೊಳ್ [6]ಪ್ರಾಣದೊಳ್ ||
ಮರುತಂ ನಾಭಿಯೊಳಗ್ನಿ ಪಾದತಳದೊಳ್ ಪೃಥ್ವೀತಳಾನೀಕಮಾ ।
ಕ್ಷರನಂಗೋದ್ಭವಮಾದು ವಷ್ಟಗಣಗಳ್ ಸಂಪೂರ್ಣಚಂದ್ರಾನನೇ ||
(೩೭ನೆಯ ಪದ್ಯವಾದಮೇಲೆ ಈ ಪದ್ಯವು ಎರಡು ಪ್ರತಿಗಳಲ್ಲಿದೆ.)

(5) ಗಳಿಂ, (ಪಾ) (6) ಪುಟ್ಟುಗುಂ, ನಿರುಂತಂ ಪ್ರಾಣದಿವಾಯು ವಾತಸಖನುಂ ಮಧ್ಯಾಂಗದೊಳ್ ಪುಟ್ಟುಗುಂ, ಉರದೊಳ್ ಭೂತಶರೀರಂಗೆ ನೇತ್ರಂಗಳ ಮೃತಾಕ್ಷರಗಳಿಗೆ ಚೆಲ್ವು (ಪಾ.)

(ಗಣಫಲಶ್ರುತಿ)

ಮ|| ಧರೆಯಿಂ ಶ್ರೀ ಜಲದಿಂ ಮಹೋನ್ನತಿ ಯಶಂ ಪದ್ಮಾರಿಯಿಂದಾಯು[1]ದೇ |
ವರಿನಂತಾರುಜೆ ಭಾನುವಿಂ ಮರಣಮತ್ಯುಗ್ರಾಗ್ನಿಯಿಂ ಶೂನ್ಯಮಂ ||
[2]ಬರದಿಂ ವಾಯುವಿನಿಂ ವಿದೇಶಗಮನಂ ಕಾವ್ಯಾಧಿಪಂಗಕ್ಕು ಮೆಂ |
ದೊರೆದಂ ಸತ್ಕವಿ ನಾಗವರ್ಮನಖಿದಲಾಶಾದಂತಿಯದಂತಂಬರಂ ||೪೧||

*ಶಾ|| ಆಶೀರ್ವಾದದೊಳುರ್ವಿಯುಂ ಪರಬಲಂ ಮುತ್ತಿರ್ದೊಡಾ ತೋಯಮುಂ |
[3]ಕ್ಲೇಶವ್ಯಾಧಿಯೊಳಿರ್ಪವಂಗೆ ಪವನಂ ಧೀರೋನ್ನತಂಗಗ್ನಿ [4]ಮೋ |
ದಾಶಾತ್ಯಾಗದೊಳಿಂದು ದಾಟಿಯಿಡುವಂಗ[5]ಭ್ರಂ ಸುಪರ್ವಾಣಸಂ |
ಘೇಶಂ ಚಾಗಿಗೆ ಸಲ್ಗುಮಿಂ ತಿಳಿದು [6]ಪೇಟಿಲ್ಲಲ್ಲಿಗಬ್ಜಾನನೇ ||೪೨||

ಕಂ|| ಧರೆ ಜಲ ನಿಶಾಕರಂ ಸುರ |
ಪುರಗಣಮುಂ ಶುಭಮೆನಿಕ್ಕುಮಿಂತಿವು ನಿರುತಂ ||
ತರಣಿ ನಭ ವಾಯು ವಗ್ನಿಯು |
ವಿರಲಿಂತಿವು ಗಣದೊಳಶುಭಮಕ್ಕುಮವೋಘಂ ||೪೩||§

---

(1) ನಿರ್ಜರರಿಂ ತಾಂ, (2) ಬರದಿಂ ಸಗ್ಗದ ಸೌಖ್ಯಸತ್ಫಲಗಳುಂ, (3) ಕ್ಲೇಶವ್ಯಾಧಿಗೆ ವಾಯು ಧೈರ್ಯಕನಲಂ ಭೀತಂಗಮಾದಿತ್ಯನಾ, (4) ಸಂತೋಷ ತ್ಯಾಗಿಗಮಿಂದು ದಾಟೀಯಿಡುವಂಗಂ ದಂಬರಂ ತ್ಯಾಗಿಗಂ ಭಾಸ್ವದ್ದೇವಗಣಂಗಳೆಂದಱಿಪಿದಂ ಪಂಕೇಜಪತ್ರೇಕ್ಷಣೇ, (ಈ ಪಾಠದಲ್ಲಿ ಪ್ರಾಸದಲ್ಲಿ ಶ, ಷ, ಸ್ಜ, ಅಕ್ಷರಗಳಿರುವುದು ಅಸಾಧುವು.) (5) ಗಂದಂಬರಂ ಕಾಮಿಗಂ, (6) ಪೇಟಿಲ್ಪಟ್ಟು ದಬ್ಜಾನನೇ,

*ಮ॥ ಸಿರಿಯಂ ಧಾತ್ರಿ ಜಲಂ ಪ್ರವೃದ್ಧಿ ಚಯಮಂ ಸ್ವಾಹಾಪ್ರಿಯಂ ಮೃತ್ಯುವಂ।
ಮರುತಂ ಸ್ಥಾನವಿಯೋಗಮಂ 10ಗಗನ ಮತ್ತಾಶೂನ್ಯಮಂ ಭಾಸ್ಕರಂ॥
ಪಿರಿದುಂ ರೋಗಮನಿಂದು ಕೀರ್ತಿಚಯಮಂ ಸ್ವರ್ಗಂ ಮಹಾಯುಷ್ಯಮಂ।
ನಿರುತಂ ಮಾಡುಗು11ಮೆಂಗಟುಮಿಾಗಣಫಲಂ ಕೇಳ್ ನೀಂ ಸರೋಜಾನನೇ ॥

(10) ಗಗನದಿಂ ದೇಶಾಂತರಂ, (11) ಮೆಂಟವೇ.

§ಈ ಸ್ಥಳದಲ್ಲಿ ಗಣಫಲ ಮತ್ತು ಗಣಲಕ್ಷಗಳನ್ನು ಹೇಳುವ ಕೆಲವು ಪದ್ಯಗಳು (ಸು. ೧೯) ಕೆಲವು ಹಸ್ತಲಿಖಿತಪ್ರತಿಗಳಲ್ಲಿವೆ, ಇವು ಅನ್ಯಕರ್ತೃಕಗಳೆಂದು ತೋರುವುದರಿಂದ (೧) ಪರಿಶಿಷ್ಟದಲ್ಲಿ ಕೊಟ್ಟಿದೆ.

ಕಂ|| ಯತಿ ಯೆಂಬುದು ಗಣ[1]ನಿಯಮ |
ಪ್ರತತಿಗುಸಿದಾರ್ಣಮಪ್ಪುದದು ದಾಂಟಲ್ಕಾ ||
ಯತಿ ಕಿಡುಗುಂ [2]ದಾಂಟಿದೊಡಾ |
ಯತಿ ಕಿಡೆ ಕವಿತ್ವ[3]ಭಿಮಾನಮೇನೆಸೆದಪುದೋ ||೪೪||
ಯತಿಯೆಂಬುದು ಗಣನಿಯಮ |
ಪ್ರತೀತಮೆಂದರೆಬರೊಲ್ವರಂತದನೆ ಕೆಲರ್ ||
ಶ್ರುತಿ[4]ಸುಭಗಂ ಸ್ವಚ್ಛಂದಂ |
ಯತಿ[5]ಯೆಂದಾ ಕಪಿಳಪಿಂಗಳಾದಿಗಳೊಲ್ಲರ್ ||೪೫||*
ಪಾದದೊಳೆರಡನೆಯಕ್ಕರ |
ಮಾದರದಿಂದಾವುದದನಱಿ[6]ತದಱಿಂ ||
ಪಾದದೊಳಿಡುವೊಡದಕ್ಕುಂ |
ಭೇದೋಕ್ತಿಕ್ರಮವಿಚಾರಿ[7]ತೋರು **ಪ್ರಾಸಂ** ||೪೬||
**ಹರಿ ಕರಿ ವೃಷಭ [8]ತುರಂಗಂ** |
**ಶರಭಮುಜಂಗಳು ಮೆನಿಪ್ಪ ಷಟ್ಪ್ರಾಸಕ್ಕುಂ** ||
ತರುಣಿ ನಿಜದೀರ್ಘ [9]ಬಿರಿದುಗ |
ಳಿರದ್ಧೊತ್ತುಂ ವ್ಯಂಜನಂ ವಿಸರ್ಗಂ ಬರ್ಕುಂ ||೪೭||†
ನುತಶಬ್ದಾಲಂಕಾರದೊ |
ಳತಿಶಯಮಿಾ ಕನ್ನಡಕ್ಕೆಸತತಂ **ಪ್ರಾಸಂ** ||
[10]ಕೃತಕೃತ್ಯಮಪ್ಪುದಱಪರ |
ಮತದಿಂದದು ತಪ್ಪೆ ಕಾವ್ಯಮೇಂ ಶೋಭಿಪುದೇ ||೪೮||

---

(1) ನಿಯತಂ ಪ್ರತೀತಮುಸಿದಾರ್ಣಮಂತದಂ, (2) ಸ್ವಚ್ಛಂದಂ, (3) ಭಿದಾನ, (4) ಸುಭಗರ್, (5) ಯೆಂದರ್ ಕಪಿಳಪಿಂಗಳಾದಿಗಳೆಲ್ಲರ್, (6) ದನಿತುಂ, (7) ತೋರ, (8) ಹಯಂತಾಂ, (9) ಬಿಂದುವಿನಿರ, (10) ಕೃತಕೃತ್ಯಮಲ್ಲ ವಲ್ಲಭ, ಮತದಿಂದದಱಪ್ರಭೇದಮಿಾತೆ ಱನಕ್ಕುಂ (ಕವಿರಾ.)

*ಇಲ್ಲಿಂದ ಮುಂದೆ "ಅಸದರ್ಥಂ ವಿಪರೀತ ಕಲ್ಪನೆ..." ಎಂಬ ಪದ್ಯವನ್ನಾರಂಭಿಸಿ ಪ್ರಾಸಪ್ರಾಸ ಭೇದಗಳನ್ನು ಹೇಳುವ ೧೬ ಪದ್ಯಗಳು ಕೆಲವು ಕೈಬರಹದ ಪ್ರತಿಗಳಲ್ಲಿ (ಕಿಟ್ಟೆಲ್ ಮುದ್ರಣದಲ್ಲಿಯೂ) ಇರುವುವು, ಇವುಗಳಲ್ಲಿ ೧ನೆಯದು ಕಾವ್ಯಾವಲೋಕನದಲ್ಲಿದೆ, ಉಳಿದುವು ಸ್ವಲ್ಪ ಮಾರ್ಪಾಡಿನಿಂದ ಕವಿರಾಜ ಮಾರ್ಗದಿಂದ ತೆಗೆದುಕೊಂಡುವುಗಳಾಗಿವೆ. ಪ್ರಾಸ ವಿಷಯವು ತಿಳಿಯಬೇಕಾಗಿರುವುದರಿಂದ ಅವನ್ನು ಇಲ್ಲಿ ಹೇಳಿದೆ.

†ನಿಜದಿಂ ಬಂದೊಡೆ ಸಿಂಗಂ। ಗಜ ದೀರ್ಘಂ ಬಿಂದು ವೃಷಭ ವ್ಯಂಜನ ಶರಭಂ॥

*ಕಂ|| ವಿನುತ ಪ್ರಾಸಂ, ಶಾಂತೋ |
ಪನತಂ ವರ್ಗೋದಿತಂ ಸವಿಸರ್ಗಗತಂ [1]ತಾ ||
ನನುಗತ ಮಂತಗತಂ ಸಂ |
[2]ಜನಿತಂ ವಿಬುಧೋಕ್ತಿಯಿಂದಿವಿಂತಾಱುತೆಱಂ ||೪೯||

†ಬೆರಸಿರೆ ಮುಂದಂ ಯೋಗಾ |
ಕ್ಷರಂಗಳೇಕಸ್ವರಂಗಳಿಂ ಸುಪ್ರಾಸಂ ||
ನೆರೆದು ವಿಪರ್ಯಾಸಕ್ರಮ |
ಮಿರೆ ಸತತಂ ಶಾಂತಪೂರ್ವ ಮಕ್ಕುಂ ಪ್ರಾಸಂ ||೫೦||

ಶಾಂತಪ್ರಾಸದ ಭೇದಮ |
ದಿಂತಿರ್ಕುಂ ವರ್ಗದಕ್ಕರಂಗಳ್ ನಾಲ್ಕುಂ ||
ಶಾಂತಮಿರೆ ಪೇೞ್ದ ತಾಣದೊ |
ಳಂತಕ್ಕುಂ ಪ್ರಾಕ್ತನೋಕ್ತ ವರ್ಗಪ್ರಾಸಂ ||೫೧||

---

(1) ಮ. ತ್ತ. (2) ಜನಿತವಿಭೇದೋಕ್ತಿಯಿಂದೆ (ಕವಿರಾ, ಪಾ.)

* ಉದಾಹರಣೆ—

ಕಂ|| ಮನೆಗಿಂದು ಬರ್ಕುಮೆಂದಾ |
ನನೇಕ[3]ವಿಧ ವಸ್ತು[4]ವಾಹನಂಗಳನೊಸೆದಿಂ ||
ಬಿನೆ ಪಸರಿಸಿ [5]ಕುಳ್ಳಿರ್ದಂ |
ಜನೇಶ ನಿಂತೇಕೆ ಕಳೆದುಪೋದನೊ ಪೇೞಾ ||೧||

ಎಂಬುದು ವಿನುತಪ್ರಾಸಂ |
ಸಂಬಂಧಾಕ್ಷರದೊಳೆಲ್ಲ ಮಾತ್ರೆಗಳುಂ ತ ||
ಳ್ತಿಂಬಾಗಿ ಬೆರಸೆ ಶೋಭಾ |
ಡಂಬರಮಂ ಪಡೆಗುಮುಚಿತ ಕಾವ್ಯೋಕ್ತಿಗಳೊಳ್ ||೨||

(3) ತರ, (4) ವಾಹನಾದಿಯನೊಸೆದಿಂ (ಕವಿರಾ, ಪಾ ) (5) ಕುಡಲಿರ್ದಂ.

† ಉದಾಹರಣೆ—

ಕಂ|| ಪತ್ತಿ ಪ್ರಮಾದಫಲಕಮ |
ನತ್ತು ಗ್ರಗ್ರಾಹನಿವಹ ಸಂಕ್ಷೋಭಿತದೊಳ್ ||
ಮತ್ತೀ ರತ್ನಾಕರದೊಳ್ |
ಶುಕ್ತಿಕೆಯೆನೆ ಬೞ್ದೆಂತು ಬೞ್ದುದೆ ಚೋದ್ಯಂ ||

*ಕಂ|| ಇದು[1] ಸದ್ವರ್ಗಪ್ರಾಸ |
ಕ್ಕದಾಹೃತಂ ಕುಱುತ ಶ ಷ ಸ ವರ್ಣ[2]ತ್ರಯಮುಂ ||
ವಿದಿತಪ್ರಾಸ [3]ವಿವಿಕ್ತಾ |
ಸ್ಪದದೊಳ್ ನಿಲೆ ಪೇೞ್ದೊಡದು ಸಮೀಪ ಪ್ರಾಸಂ ||೪೬||

‡ಎಂದಿಂತು ಸಮೀಪಪ್ರಾ |
ಸಂ ದರ್ಶಿತಮಾಯ್ತು ಮತ್ತನುಪ್ರಾಸಮುಮಂ ||
ಸಂದಿಪೆನೆಣೆಯಕ್ಕರ ಮೊಂ |
ದೊಂದೊಂದಱೊ[4]ಳಳವಡಿಸಿ ಪೇೞಲನುಗತಮಕ್ಕುಂ ||೪೭||

§ಇಂತಿದನು ಪ್ರಾಸಂ ಪಾ |
ದಾಂತದೊಳೆಂದಾವು ದಾನು ಮಿಟ್ಟಕ್ಕರಮಂ ||
ಮುಂತಣ ಪಾದಾಂತಂಗಳೊ |
ಳಂ ತಡೆಯದೆ ಪೇೞ್ದೊಡಂತ ದಂತ ಪ್ರಾಸಂ ||೪೮||

---

(1) ದಲ್ವರ್ಗ, (2) ಕ್ರಮಮುಂ, (3) ವಿಯುಕ್ತಾ, (4) ಳಳವಡೆಯುಸಿರ್ದೊಡನು (ಪಾ.) ಳಳವಡಿಸಿ ಬಂದೊಡನು.

*ಉದಾಹರಣೆ—

ಕಂ|| ಸಕಲಜನವಿನುತನಂ ಶತ |
ಮಖ ಸದೃಶವಿಶಾಲ ವಿವಿಧ ವಿಭವೋದಯನಂ ||
ಸುಗುಣಗಣಯುತನ ನರಿಬಲ |
ವಿಘಾಟನನಂ ಕಂಡನಣುವನಾ ರಾಘವನಂ ||

‡ಉದಾಹರಣೆ—

ಶಶಧರ ಬಿಂಬುನಯನಂ |
[5]ಝುಷಕೇತನ ಮಾತೆಯಂ ಸರೋಜಾಂಬಕೆಯಂ ||
ಬಿಸವಿಶದವರ್ಣೆಯಂ ಕಂ |
ಡೊಸೆದಂ ಬನದೊಳಗೆ ಜನಕತನುಜೆಯನಣುವಂ ||

§ಉದಾಹರಣೆ—

ಜನವಿನುತ ನನಘ ನನುಪಮ |
ನನುನಯಪರ ನರಸನಿನಿಸು ನೆನೆನೆನೆದು ಮನೋ ||
ಜನಿತಮುದನನಿಲತನಯನ |
[6]ನನುತ್ರುತಂ ವಚನ ರಚನ ನಂತಿರೆ ನುಡಿದಂ ||
ಅತಿವಿಶದಯಶೋವೃತ್ತಂ |
ನತಸಕಲಾರಾತಿಜನವಿತಾನಂ ಮತ್ತಂ |
ವಿಹಿತಶ್ರೀ ಸಂಪತ್ತಂ |
ಶತಮುಖ ಸದೃಶಾನುಭಾವವಿಭವಂಬೆತ್ತಂ ||

(5) ಝುಷಕೇತನೆ ಕೇತನಾಭತನುವಂ |
(6) ನನೃತ ವಚನ ರಚನನಂತಿರೆನೆ | (ಪಾ) ನನೃತಂವಚನ ಪ್ರಪಂಚನಂತಿರೆ, ನುಡಿದಂ ||

*ಕಂ|| ಪ್ರಾಸಾನು ಪ್ರಾಸಾಂತ |
ಪ್ರಾಸಂಗಳ್ ಮೂಱುವತಿಶಯಂಗಳ್ ಮತ್ತಂ ||
ಪ್ರಾಸಾಭಾಸಂ ಮೂಱುಂ |
ಭಾಸುರ ಕಂಜಾಯತಾಕ್ಷಿ ಕೇಳದ ನೊರೆದೆಂ || ||೫೫||

ವಚನಂ|| ಸಂಸ್ಕೃತಂ, ಪ್ರಾಕೃತಂ, ಅಪಭ್ರಂಶಿಕಂ, ಪೈಶಾಚಿಕಂ, ಎಂಬ ಮೂಱುವರೆ ಭಾಷೆಗಳೊಳ್ ಪುಟ್ಟುವುವೆಲ್ಲಂ[1] )ದ್ರವಿಡಾಂಧ್ರಕರ್ಣಾಟಕಾದಿಷಟ್ಪಂಚಾಶತ್ಸರ್ವ ವಿಷಯ ಭಾಷಾ ಜಾತಿಗಳಕ್ಕುಂ, ಅಲ್ಲ – ಸಮಂ, ಅರ್ಧಸಮಂ ವಿಷಮಮೆಂದು ವೃತ್ತಂ ಮೂಱುತೆಱನಕ್ಕುಂ, ಅವಾವುವೆಂದೊಡೆ:—೧ ಉಕ್ತೆ, ೨ ಅತ್ಯುಕ್ತೆ, ೩ [2]ಮಧ್ಯೆ, ೪ ಪ್ರತಿಷ್ಠೆ, ೫ ಸುಪ್ರತಿಷ್ಠೆ, ೬ ಗಾಯತ್ರಿ, ೭ ಉಷ್ಣಿಕ್, ೮ ಅನುಷ್ಟುಪ್, ೯ ಬೃಹತಿ, ೧೦ ಪಙ್ಕ್ತಿ, ೧೧ ತ್ರಿಷ್ಟುಪ್, ೧೨ ಜಗತಿ, ೧೩ ಅತಿಜಗತಿ, ೧೪ ಶಕ್ವರಿ, ೧೫ ಅತಿಶಕ್ವರಿ, ೧೬ ಅಷ್ಟಿ, ೧೭ ಅತ್ಯಷ್ಟಿ, ೧೮ ಧೃತಿ, ೧೯ ಅತಿಧೃತಿ, ೨೦ ಕೃತಿ, ೨೧ ಪ್ರಕೃತಿ, ೨೨ ಆಕೃತಿ, ೨೩ ವಿಕೃತಿ, ೨೪ ಸಂಕೃತಿ, ೨೫ ಅತಿಕೃತಿ, ೨೬ ಉತ್ಕೃತಿ – ಎಂದಿಪ್ಪತ್ತಾಱುಂ ಛಂದಗಳಕ್ಕುಂ

ಮತ್ತಂ ಉಕ್ತಾದಿ ಉತ್ಕೃತಿ ಪರ್ಯಂತಂ ನೆಗಲ್ದಿಪ್ಪತ್ತಾಱುಂ ಛಂದಸ್ಸುಗಳಿಂ ಪೊಱಗೆ ಪುಟ್ಟುವುವಾವುವೆಂದೊಡೆ – ಮಾಳಾ ವೃತ್ತ[3]ದಂಡಕಂಗಳ್.

ಮತ್ತಂ ಕರ್ಣಾಟಾಂದ್ರವಿಡ ವರಾಟ ಲಾಟ ಮಾಳವ ಗೌಳ ಘೂರ್ಜರ ಕಳಿಂಗಾಂಗ ವಂಗ ಕೇರಳ ಬಾಹ್ಲಿಕ ಮಗಧ ಚೇದಿ ವಾಚಾಲ ? ಪಾಂಚಾಲ[4]ವೆಂಗಿ ತಾಳವಾದಿ ದೇಶಭಾಷೆಗಳೊಳ್, ಪುಟ್ಟುವುವೆಲ್ಲಂ ಸರ್ವವಿಷಯ ಭಾಷಾ ಜಾತಿಗಳಕ್ಕುಂ ಅವಾವುವೆಂದೊಡೆ—

ಕಂ|| ಮದನವತಿಯಕ್ಕರಂ ಚೌ |
ಪದಿ ಗೀತಿಕೆಯೇಳೆ ತಿವದಿ ಯುತ್ಸಾಹಂ ಷ |
ಟ್ಪದಿಯಕ್ಕರಿಕೆ[5]ಕರಂ ಚೆ |
ಲ್ವೊದವಿದ ಛಂದೋವತಂಸಮಜ್ಜದಳಾಕ್ಷೀ ||

---

(1) ವೆಲ್ಲಂ ಸರ್ವವಿಷಯ, (2) ಮಧ್ಯಮೆ, (3) ದಂಡಕರಘಟಿ ಮಾತ್ರಾರ್ಯಾತ್ರಿಪದಿಷಟ್ಪದಿ ಅಷ್ಟಪದಿಗಣ ನಿಯಮಕಂದ ಶಂಖವೃತ, ತಾಳ ವೃತ್ತಾದಿ ಜಾತಿಗಳುಂಟು, ಶಂಖವೃತ್ತ ದಿಂಡಿಮ ವೃತ್ತಾದಿಗಳುಂ, (4) ಚೆಟ್ಟ, (5) ಯೆಂದಂತಾನುಕ್ತಿಯಾಗಿರೆ.

* ಈ ಸ್ಥಳದಲ್ಲಿ ಕೆಲವು ಪ್ರತಿಗಳಲ್ಲಿರುವ "ದ್ವಿಪ್ರಾಸಂ"- ಮೊದಲಾದ ಪದ್ಯಗಳನ್ನು ಪರಿಶಿಷ್ಟ (೧) ರಲ್ಲಿ ಕೊಟ್ಟಿದೆ.

ಕಂ|| ಒಂದೊಂದು ಜಾತಿಗಿಮ್ಮಡಿ |
[1]ಕುಂದದೆ ತಾನುಕ್ತೆಯಾದಿಯಾಗಿರೆ ಸಂಪೂ ||
ರ್ಣೇಂದುಮುಖಿ ತಿಳಿಯೆ ಪೇೞ್ವೆಂ |
ಸಂದುತ್ಕೃತಿಯೆಯ್ದೆ ವಿನೆಗವಿಂತೀಕ್ರಮದಿಂ |
ಇಂತಱಿಪಿದುಭಯ ಭಾಷೆಯೊ |
ಳಂ ತೊಡರದೆ ಸರ್ವವಿಷಯ ಭಾಷಾದಿಗಳಂ ||
ಮುಂ ತಿಳಿಪಿದಪೆಂ ನಿನಗಾ |
ನಂತರಿಸದೆ ಕೇಳಿದಂ ಪಯೋರುಹ[2]ಲಪನೇ ||

## ಗದ್ಯಂ

ಇದು ಸಕಲಸುರಾಸುರೇಂದ್ರ ಮಣಿಮಕುಟ ಘಟಿತ †ಶ್ರೀಮತ್ಪರಮೇಶ್ವರ
ಚಾರು ಚರಣಾರವಿಂದ ಮರಂದ ಮಧುಕರಾಯಮಾಣ
ವಿಬುಧಜನಮನಃ ಪದ್ಮಿನೀರಾಜಹಂಸ
**ಶ್ರೀಮತ್ಕವಿರಾಜಸಿಂಹ**
ವಿರಚಿತಮಪ್ಪ
**ಛಂದೋಂಬುಧಿಯೊಳ್**
ಸಂಜ್ಞಾಪ್ರಕರಣಂ
**— ಪ್ರ ಥ ಮಾ ಧಿ ಕಾ ರ ಂ —**



---

(1) ಸಲೆಯೊದವಿದ, (2) ವದನೇ.

† ಭಗವದ್ಭವಾನೀ ವಲ್ಲಭ ಪಾದಾರವಿಂದ ದ್ವಂದ್ವ ಮಕರಂದ ಮತ್ತ ಮಧುಕರಾಯಮಾಣ ಸುಕವಿ ಜನ ಸಂಸ್ತೂಯಮಾನ......ನಾಗವರ್ಮ ವಿರಚಿತಮಪ್ಪ - ಪ್ರಥಮಂ ಸಂಜ್ಞಾ ಪ್ರಕರಣಂ, (ಪಾ)

ಇದು ಪರಮೇಶ್ವರ ಚರಣಾರವಿಂದ ಮಧುಕರಾಯಮಾಣ ವಿಬುಧ......ರಾಜಹಂಸ ವಿರಚಿತ... ಸಂಜ್ಞಾಧಿಕಾರಂ ಸಮಾಪ್ತಂ,

ಇದು ಸಕಲಸುರಾಸುರೇಂದ್ರ ಮನೀಂದ್ರ ಮಣಿಮಕುಟ ಘಟಿತ ಶ್ರೀಮದ್ಭಗವದರ್ಹತ್ಪರ ಮೇಶ್ವರ ಪಾದಾರವಿಂದ ದ್ವಂದ್ವ......ನಾಗವರ್ಮ ವಿರಚಿತಮಪ್ಪ ಛಂದೋಂಬುರಾಶಿಯೊಳ್ ನೆಗಳ್ದ ಸಂಜ್ಞಾಧಿಕಾರಂ ಪ್ರಥಮಾಶ್ವಾಸಂ.

# ದ್ವಿತೀಯಾಧಿಕಾರಂ

## ಸಮವೃತ್ತ ಪ್ರಕರಣಂ

ಕಂ|| ಶ್ರೀಪದಮಂ ಸಮವೃತ್ತ ನಿ|
ರೂಪಣಸಮಯದೊಳೆ ತಂದು ಮೊದಲಿಟ್ಟೆನದಂ||
ಚಾಪಳಲೋಚನೆ ಬಹ್ವಾ|
ಲಾಪದೊಳೇಂ ಕೆಳದಿ ಕೇಳ ನಿನಗಭ್ಯುದಯಂ ||೧||‡

I **ಉಕ್ತೆ**ಯೆಂಬ ಛಂದದೊಳೊಂದಕ್ಕರಂ ಪಾದವಾಗಿ ಪುಟ್ಟುವ ೨ ವೃತ್ತಂಗಳೊಳಗೆ—

ಶ್ರೀವೃತ್ತಂ—

ಶ್ರೀ |
ಶಂ ||
ಕಾಂ |
ತೇ ||1|| ||೨||†

II **ಅತ್ಯುಕ್ತೆ**ಯೆಂಬ ಛಂದದೊಳೆರಡಕ್ಕರಂ ಪಾದವಾಗಿ ಪುಟ್ಟುವ ೪ ವೃತ್ತಂಗಳೊಳಗೆ—

ಗಿರಿಧರವೃತ್ತಂ—

ಮುರ |
ಹರ ||
ಗಿರಿ |
ಧರ ||1|| ||೩||

---

‡ ಕೆಲವು ಕೈಬರಹದ ಪ್ರತಿಗಳಲ್ಲಿ ಈ ವೃತ್ತವಾದಬಳಿಕ "ಇಪ್ಪತ್ತಾರು ಛಂದಸ್ಸುಗಳಿಗೂ ವೃತ್ತಗಳು ಹುಟ್ಟುವ ಲಕ್ಷಣ— ಉಕ್ತೆ ..ಉತ್ಕೃತಿ ಎಂದಿಪ್ಪತ್ತಾಱು ಛಂದಂಗಳ್ ಸಮ ಅರ್ಧಸಮ ವಿಷಯಮೆಂದು ಮೂಱುತೆಱನಕ್ಕುಂ, ಅದಱಿಂ ಪೊಱಗೆ ಮಾಲಾವೃತ್ತ ದಂಡಕಂ ರಗಳೆ ಮಾತ್ರಾಗಣ ನಿಯಮಸ್ಕಂಧಕಾದಿ ಜಾತಿಗಳೆಂಬಿವಕ್ಕುಂ ಮತ್ತಂ ಕರ್ಣಾಟಕ, ಅಂಧ್ರ ದ್ರಮಿಳಾದಿ ಸರ್ವಭಾಷಾ ಜಾತಿಗಳಕ್ಕುಂ, ಅಲ್ಲಿ ಸಮವೃತ್ತಂ ಉಕ್ತೆ, ಅತ್ಯುಕ್ತೆಯೆಂಬ.

† ಕೆಲವು ಪ್ರತಿಗಳಲ್ಲಿ "ಲ ಲ ಲ ಲ" ಎಂಬ ಲಘ್ವಕ್ಷರ ಪಾದದ ಮತ್ತೊಂದು ವೃತ್ತದ, ಲಕ್ಷಣವಿದೆ, ಹೆಸರು ಹೇಳಿಲ್ಲ

ದಿಗಂತಗವೃತ್ತಂ—

¹ಲಗೋ |
ಪಗಂ ||
ದಿಗಂ |
ತಗಂ ||2|| ||೪||

ಗರ್ವವೃತ್ತಂ—

²ಶರ್ವಂ|
ಗೀರ್ವಾ ||
ಣೋರ್ವೀ |
ಗರ್ವಂ ||3|| ||೫||

III ಮಧ್ಯೆಯೆಂಬ ಛಂದದೊಳ್ ಮೂಱಕ್ಕರಂ ಪಾದವಾಗಿ ಪುಟ್ಟುವ ವೃತ್ತಂಗಳೊಳಗೆ—

ವಾಮಾಂಗವೃತ್ತಂ—

ಭೂಮಿ ಪ್ರೋ |
ದ್ಧಾಮಂ ಕೇಳ್ ||
³ವಾಮಾಂಗೀ
ವಾಮಾಂಗಂ ||1|| ||೬||

ಪ್ರವರವೃತ್ತಂ—

ಪವನೋ |
ದ್ಭವದಿಂ ||
ಪ್ರವರಂ |
ಪ್ರವರೇ ||2|| ||೭||

---

(1) ಅಗೋ, (2) ಒಂದು ಪ್ರತಿಯಲ್ಲಿ ಈ ವೃತ್ತಕ್ಕೆ ಪ್ರತಿಯಾಗಿ "ಶ್ರೀಯಂ, ದೇಯಂ, ಜೇಯಂ, ಗೇಯಂ" ಎಂಬ ಲಕ್ಷ್ಯವಿದೆ, ಗೇಯ ವೆಂದು ವೃತ್ತದ ಹೆಸರು, (3) ಶ್ಯಾಮಾಂಗೀ, ಶ್ಯಾಮಾಂಗಂ ॥ ಶ್ಯಾಮಾಂಗವೆಂದು ವೃತ್ತದ ಹೆಸರು.

ಪಾವನವೃತ್ತಂ—

ಪಾವಕೋ |
ದ್ಭಾವದಿಂ ||
ಶ್ರೀವಧೂ |
**ಪಾವನಂ** ||3|| ||೮||

ರತಾಂತವೃತ್ತಂ—

[1]ಯುತಾಂತಂ |
ನಿತಾಂತಂ ||
**ರತಾಂತಂ** |
ಲತಾಂತೇ ||4|| ||೯||

ಪರಮು (ಪರಮೆ) ವೃತ್ತಂ—

ಸುರರ |
ನೆರವಿ ||
ನೆರೆಯೆ |
**ಪರಮೆಂ** ||5|| ||೧೦||

**IV** ಪ್ರತಿಷ್ಠೆಯೆಂಬ ಛಂದದೊಳ್ ನಾಲ್ಕಕ್ಕರಂ ಪಾದವಾಗಿ ಪುಟ್ಟುವ ೧೬ ವೃತ್ತಂಗಳೊಳಗೆ—

ಸೌಂದರವೃತ್ತಂ—

ಇಂದುಹರರ್ |
ಬಂದಿರೆ ಕೇಳ್ ||
**ಸೌಂದರವುಂ** |
ಸುಂದರಿ ನೀಂ ||1|| ||೧೧||

ಜನೋದಯವೃತ್ತಂ—

[2]ದಿನೇಶರು |
ದ್ರನಿಶ್ಚಿತಂ ||
**ಜನೋದಯಂ** |
ತನೂದರೀ ||2|| ||೧೨|

(1) ಜಲಾಂತಂ। ಜಲಾಂತೇ॥ ಬಲಾಂತಂ। ಬಲಾಂತೇ॥ **ಜಲಾಂತವೊ? ಬಲಾಂತವೊ** ವೃತ್ತದ ಹೆಸರಿರಬಹುದು

(2) ಇನೇಶರಿಂ। ದ ನಿಶ್ಚಯಂ॥ ತನೂದರೀ। ಜನೋದಯಂ॥ (ಪಾ).

ದೇವರಮ್ಯವೃತ್ತಂ—

ಪಾವಕಾಗ್ರಂ |
ಭಾವನೀಯಂ ||
ದೇವದೇವಂ |
[1]ದೇವರಮ್ಯಂ ||3|| ||೧೩||

ಮೃಗನೇತ್ರವೃತ್ತಂ—

[2]ಸಗಯುಗ್ಮಂ |
ನೆಗಳ್ದಾಗಳ್ ||
ಮೃಗನೇತ್ರೇ |
ಮೃಗನೇತ್ರಂ ||4|| ||೧೪||

ಸುರತರುವೃತ್ತಂ—

ಸುರಹರಿ |
ನೆರೆವಿರೆ ||
ವರವಧು |
ಸುರತರು ||5|| ||೧೫||

ಕಾಮಾಂಗವೃತ್ತಂ—

ವ್ಯೋಮಂ ಹರಂ |
ತಾಮಾಗಿರಲ್ ||
ಶ್ಯಾಮಾಂಗಿ ಕೇಳ್ |
[3]ಕಾಮಾಂಗ ಮಂ ||6|| ||೧೬||

V ಸುಪ್ರತಿಷ್ಠೆಯೆಂಬ ಛಂದದೊಳಯ್ದಕ್ಕರಂ ಪಾದಮಾಗಿ ಪುಟ್ಟುವ ೩ ವೃತ್ತಂಗಳೊಳಗೆ—

ನಂದಕವೃತ್ತಂ—

ಒಂದು ವಹ್ನಿಯೊಳ್ |
ನಿಂದೊಡಾಲಗಂ ||
ಸುಂದರಾಂಗಿ ಕೇಳ್ |
ಸಂದ [4]ನಂದಕಂ ||1|| ||೧೭||

---

(1) ಭಾವರಮ್ಯಂ (ಪಾ), ಪಾವಕಾಗ್ರಂ। ದೇವದೇವಂ॥ ಭಾವನೀಯಂ। ದೇವರಮ್ಯಂ॥ (ಪಾ)

(2) ಲಗಯುಗ್ಮಂ। ಒಂದು ಪ್ರತಿಯಲ್ಲಿ, ಮು :ುತಂ ಗಂ। ನೆರೆದಿರ್ದಂ॥ ದರದಂ ತಾಂ। ವರಕಾಂತೇ॥ ಈ ಪಾಠವಿದೆ. ಅರದ (ದರದ ?) ಎಂದು ವೃತ್ತದ ಹೆಸರು.

(3) ಕಾಮೋದ್ಭವಂ (ಪಾ.)　(4) ನಂದನಂ (ಪಾ.)

ಕಾಂಚನಮಾಲಾ (ಲೆ) ವೃತ್ತಂ—

ಮಿಂಚುವ [1]ಚಂದ್ರಂ |
ಗಂಚಿತ ರುದ್ರರ್ |
[2]ಚಂಚಲನೇತ್ರೇ |
**ಕಾಂಚನಮಾಲೆ** ||2|| ||೧೮||

ಸನ್ಮೃಗನೇತ್ರವೃತ್ತಂ—

ಸಗಯುಗ್ಮಂಗಳ್ |
ನೆಗಲ್ದಾಗಳ್ ಕೇಳ್ |
ಮೃಗನೇತ್ರೇ ಸ |
ನ್ಮೃಗನೇತ್ರಂ ತಾಂ ||3|| ||೧೯||

ತಿಲಕವೃತ್ತಂ—

ವ್ಯೋಮಂ [3]ಹರಿ ಮುಂ |
ದಾ ಮಾರಹರಂ ||
ತಾಮಾಗೆ ಸಖೀ |
ನಾಮಂ **ತಿಲಕಂ** ||4|| ||೨೦||

ಅನಂಗವೃತ್ತಂ—

[4]ದಿನೇಶನಿಂದ |
ತ್ತ ನೀಲಕಂಠರ್ |
ತನೂದರೀ [5]ನಿ |
ಲ್ಕ **ನಂಗಮುಕ್ಕುಂ** ||5|| ||೨೧||

ಪ್ರೇಮವೃತ್ತಂ—

ಸೋಮ ಹರಿಯುಂ |
ಕಾಮ ಹರನುಂ ||
ತಾಮಿರೆ ಪೆಸರ್ |
**ಪ್ರೇಮ** ಮಬಲೇ ||6|| ||೨೨||

---

(1) ರುದ್ರಂ। ಗಂಚೆಯ (ಪಾ.) (2) ಸಂಚಲನೇತ್ರೇ (ಪಾ.) ಸಂಚಿಸೆವೃತ್ತಂ, (ಪಾ.) ಸಂಚಿ ನಾಮಂ (ಪಾ.)

(3) ಹರಿಯುಂ। ಕಾಮಂ ಹರನುಂ (ಪಾ.) ಹರಿಯಂ। ದೇಮಾರಹರಂ॥ ತಾಮಾಗೆ ಸತೀ (ಪಾ.

(4) ದಿನೇಶ್ವರಾಂತಂ। ದ್ವಿನೀಲಕಂಠರರ್॥......। ಮನೋದಯಾಶಂ (ಪಾ.) ದಯಾಂಶಂ (ಪಾ

(5) ನಿಲ್ಕೆ ನಂದಮುಕ್ಕುಂ (ಪಾ.) ಈ ಪಾಠದಲ್ಲಿ ನಂದವೆಂದು ವೃತ್ತದ ಹೆಸರು.

ಸರಸಿರುಹವೃತ್ತಂ—

1ಸುರಗಣಮುಂ |
ಹರಿಹರರುಂ ||
ಬರೆ ಕೇಳದೀ |
**ಸರಸಿರುಹಂ** ||7||  ||೨೩||

VI **ಗಾಯತ್ರಿ**ಯೆಂಬ ಛಂದದೊಳಾಱಕ್ಕರಂ ಪಾದಮಾಗಿ ಪುಟ್ಟುವ ೬೪ ವೃತ್ತಂಗಳೊಳಗೆ—

ಶಾಲಿನೀವಿತಾನವೃತ್ತಂ—

ಜ್ವಾಳಿ ತೋಯಮೆಯ್ತಂ |
ದೋಳಿವೆತ್ತೊಡಕ್ಕುಂ ||
ನೀಳಕುಂತಳೇ ಕೇಳ್ |
2**ಶಾಲಿನೀವಿತಾನಂ** ||1||  ||೨೪||

ಉದಾತ್ತವೃತ್ತಂ—

ನಯಗಣದಿಂದಂ |
ನಿಯತಮಿದಕ್ಕುಂ ||
ಪ್ರಿಯಲಲನೇ ಕೇಳ್ |
3ನಯದಿ **ನುದಾತ್ತಂ** ||2||  ||೨೫||

ಶಶಿಕಾಂತವೃತ್ತಂ—

ಶೀತಕರತೋಯಂ |
ದ್ಯೋತಿಸಿರೆ ನೀಲಾ ||
ಬ್ಜಾತನಯನೇ ಕೇ |
ಳೋತು **ಶಶಿಕಾಂತಂ** ||3||  ||೨೬||

ವಿಚಿತ್ರವೃತ್ತಂ—

ಪಯೋಯುಗ್ಮದಿಂದಂ |
ಪಯೋಜಾಯತಾಕ್ಷೀ |
ಪ್ರಯೋಗಪ್ರಸಿದ್ಧಂ |
ನಿಯುಕ್ತಂ ವಿಚಿತ್ರಂ ||4||  ||೨೭||

---

(1) ಬರೆ ನಲಗಂ। ಸರಸಿರುಹಂ॥ ವರವರನು॥ ಪರಮಜಿನಾ॥ (ಇದು ಜೈನಸಂಪ್ರದಾಯದ ಪಾಠವು.)

(2) ಮಾಲಿನೀ ವಿತಾನಂ (ಪಾ.) (3) ನಯನ ಮುದಾತ್ತಂ (ಪಾ ) ನಯನವೆಂದು ವೃತ್ತದ ಹೆಸರು.

**ತನುಮಧ್ಯವೃತ್ತಂ—**

ವ್ಯೋಮಾದಿ ಜಲಾಂತಂ |
ತಾಮಾಗೆ ನಿತಾಂತಂ ||
ಶ್ರೀಮಾನಿನಿ [1]ಕೇಳಾ |
[2]ನಾಮಂ [3]**ತನುಮಧ್ಯಂ** ||5|| ||೨೮||

**ಕುಮುದವೃತ್ತಂ—**

ಅನಿಲದ್ವಿತಯಂ |
ಘನಮೆಲ್ಲಿಯು ಮಿಂ ||
ಬಿನಮೊಂದಿರೆ ಕೇಳ್ |
[4]ವನಿತೇ [5]**ಕುಮುದಂ** ||6|| ||೨೯||

**ಕಮಳವೃತ್ತಂ—**

ಉರ್ವ್ಯಗ್ರಂ ಮರುತಂ |
ಪರ್ವಿರ್ದಂದಬಲೇ ||
ಸರ್ವಾದ್ಯಂತದೊಳಂ |
[6]ನಿರ್ವಾದಂ [7]**ಕಮಳಂ** ||7|| ||೩೦||

**ಸುಲಲಿತವೃತ್ತಂ—**

ಕುಲಿಶ [8]ಭೂಯುಗ್ಮಂ |
ನೆಲಸಿದಂದಕ್ಕುಂ |
ಜಲಜಪತ್ರಾಕ್ಷೀ |
**ಸುಲಲಿತಂ ವೃತ್ತಂ** ||8|| ||೩೧||

VII **ಉಷ್ಣಿಕ್ಕೆಂಬ** ಛಂದದೊಳೇಟಕ್ಕರಂ ಪಾದಮಾಗಿ ಪುಟ್ಟುವ ೧೨೮ **ವೃತ್ತಂಗಳೊಳಗೆ—**

**ವಿಶಾಲವೃತ್ತಂ—**

ತ್ರಿದಶಪವನೇಶರ್ |
[9]ಪುದಿದು ನಿಲೆ ಪಾದಾಂ ||
ತ್ಯದೊಳಱಿ ವಿದಗ್ಧೇ |
ಸದಮಳ [10]**ವಿಶಾಳಂ** ||1|| ||೩೨||

---

(1) ನೀಂ ಕೇಳ್ (ಪಾ.) (2) ನಾಮಂತಿಲಕಂತಾಂ (ಪಾ.) (3) ತನುಮಧ್ಯೆ, (4) ವಿನುತಂ ಮುಕುರಂ (ಪಾ.) ಮುಕುರವೆಂದು ವೃತ್ತದ ಹೆಸರು, (5) ಮುಕುರಂ (ಪಾ.) ಮುಕುಳಂ (ಪಾ.) ಕುಮುದಂ (ಪಾ.) (6) ನಿರ್ವ್ಯಾಜಂ (ಜ್ಯಂ), (7) ಕಮಳೇ, (8) ಭೂಮಾತ್ಮಂ, (9) ಪದೆದು, (10) ವಿಚಿತ್ರಂ, ಸದಮಳವಿತಾನಂ (ಪಾ.) ಸದಮಲ ಅಥವಾ ವಿತಾನವೆಂದು ವೃತ್ತದ ಹೆಸರು.

ಅಮುಳವೃತ್ತಂ—

ಇಂದುಯುಗಂಗಳ ಮುಂ |
ದಿಂದುಧರಂ ಬರೆ ತಾ ||
ನೆಂದು ಮಿದರ್ಕೆ ಪೆಸರ್ |
ಸೌಂದರಿ [1]ಕೇಳಮುಳಂ ||2|| ||೩೩||

ವಿನಮ್ನವೃತ್ತಂ—

ಶೀತಕರಾಗ್ನಿ ಚೇತೋ |
ಜಾತಹರರ್ಕಳಿರ್ದ್ದಂ ||
ದೇತೊದಳೋಪನೇ ನಾ |
ಮಾತಿಶಯಂ [2]ವಿನಿಮ್ನಂ ||3|| ||೩೪||

ಜಗದ್ವಿಭೂತಿವೃತ್ತಂ—

ತೇಜಮರ್ಕ ನೀಶನಿಂ |
ದೋಜೆ ವೆತ್ತು [3]ನಿಂದೊಡಂ ||
[4]ಭೋಜಪತ್ರನೇತ್ರೆ ಕೇ |
ಳೀ ಜಗದ್ವಿಭೂತಿಯುಂ ||4||* ||೩೫||

ಚಿತ್ರವೃತ್ತಂ—

ಧಾತ್ರೀಚಂದ್ರೇಂದುಧರಂ |
[5]ಸೂತ್ರಾರ್ಥಾಯತ್ತಗಣಂ ||
ಧಾತ್ರೀಪೂಜ್ಯಂ ಪೆಸರಿಂ |
ಚಿತ್ರಂ ಪಂಕೇಜಮುಖೀ ||5|| ||೩೬||

ಶಶಾಂಕವಕ್ತ್ರವೃತ್ತಂ—

ಸುರಗಣಾಗ್ನಿಶರ್ವಂ |
ಕರಮಪೂರ್ವಮಾಗು ||
ತ್ತಿರೆ ಶಶಾಂಕವಕ್ತ್ರಂ |
ಸರಸಿಜಾಯತಾಕ್ಷೀ ||6|| ||೩೭||

---

(1) ಕೇಳ್ ಕಮಳಂ (ಪಾ.) ಕಮಳವೆಂದು ವೃತ್ತದ ಹೆಸರು, (2) ವಿರಾಮಂ (ಪಾ.) ವಿರಾಮವೆಂದು ವೃತ್ತದ ಹೆಸರು, (3) ಬಂದೊಡಂ, (4) ಭೋಜನೇತ್ರೆ ಕೇಳ ನೀ। ನೀಜಗ (ಪಾ.) (5) ಸೂತ್ರಾರ್ಥಂ ನೀತಗುಣಂ (ಪಾ.) ಸೂತ್ರಾರ್ಥಂ ಬೆತ್ತಗುಣಂ, ಸೂತ್ರಧಾರಂ ವೀತಪಿತಂ (ಪಾ.)

* ವೀತಿಹೋತ್ರ ಭಾನುವುಂ। ಜಾತವೇದನೇತ್ರನುಂ ॥ ಪ್ರೀತಿಯಿಂದೆ ಬಂದಿರ। ಲ್ಕೋತು ಕೇಳ್ ಸುನಾಮನಂ॥ (ಇದು ಒಂದು ಪ್ರತಿಯಲ್ಲಿದೆ, ಜಗದ್ವಿಭೂತಿವೃತ್ತದ ಲಕ್ಷಣವೇ ಇದಕ್ಕೂ ಇದೆ – ಈ ಪಾಠದಲ್ಲಿ ಸುನಾಮವೆಂದು ವೃತ್ತದ ಹೆಸರು.)

ಸರಲವೃತ್ತಂ—

[1]ಮರುತಂ ಜಾತವೇದಂ |
ಹರನುಂ ಕೂಡಿ ಬಂದಂ ||
ದರವಿಂದಾಯತಾಕ್ಷೀ |
**ಸರಲಂ** ವೃತ್ತನಾಮಂ ||7|| ||೩೮||

ಸುಲಭವೃತ್ತಂ—

ನನಭವಯುತದಿಂ |
ವನರುಹವದನೇ ||
ನಿನಗಱಿಪುವೆ ನಾಂ |
ಜನನುತ **ಸುಲಭಂ** ||8|| ||೩೯||

ಸರಗವೃತ್ತಂ—

[2]ನರಗಮೆಂಬ ವೃತ್ತಾ |
ಕ್ಷರಮೆ ಪಾದಮಾಗು ||
ತ್ತಿರೆ ಶಶಾಂಕವಕ್ತ್ರೇ |
**ನರಗ**ನಾಮ ವೃತ್ತಂ |9|| ||೪೦||

ಕೋಮಲವೃತ್ತಂ—

ಸತಗಂಗಳ್ ಕೂಡಿ ಪ |
ದ್ಧತಿಯಿಂ [3]ಪಾದಾಕ್ಷರಂ ||
ಸತತಂ [4]ಬಂದಿರ್ದೊಡಾ |
ಯತನೇತ್ರೇ **ಕೋಮಲಂ** ||10||* ||೪೧||

VIII **ಅನುಷ್ಟುಪ್ಛಂದ** ಛಂದದೊಳೆಂಟಕ್ಕರಂ ಪಾದಮಾಗಿ ಪುಟ್ಟುವ **೨೫೬** ವೃತ್ತಂಗಳೊಳಗೆ—

ವಿದ್ಯುನ್ಮಾಲಾವೃತ್ತಂ—

ಪಿಂತುರ್ವೀ ಯುಗ್ಮಂಗಳ್ ಬರ್ಕುಂ |
ಮುಂತೀಶಾನದ್ವಂದ್ವಂ [5]ನಿಲ್ಕುಂ ||
ಸಂತಂ ನೀಂ ಕೇಳಂಭೋಜಾಕ್ಷೀ |
[6]ಕಾಂತಂ ವಿದ್ಯುನ್ಮಾಲಾ ವೃತ್ತಂ ||1|| ||೪೩||

---

(1) ಸರಗಂಗಳ್ಗಣಂ ಮುಂ । ನೆರೆದಿಂ ಬಾಗಿಬಂದಂ ॥(ಪಾ.) (2) ಸರಗ (ಪಾ) ಇದೂ ಶಶಾಂಕವಕ್ತ್ರವೂ ಒಂದೇ ಲಕ್ಷಣವುಳ್ಳುವು, ಇದರಲ್ಲಿ ಗಣಗಳನ್ನು ಸಾಕ್ಷಾತ್ತಾಗಿ ಹೇಳಿದೆ, ಅಲ್ಲಿ ಗಣಗಳ ಸಂಜ್ಞಾ ಶಬ್ದವನ್ನುಪಯೋಗಿಸಿದೆ, ನರಗಮೆಂಬ ವರ್ಣೋತ್ಕರವು, (3) ಚೆಲ್ವಾಗಿರಲ್, (4) ಪಂಕೇರುಹಾ ಯತನೇತ್ರ (ಪಾ) (5) ತೋರ್ಕುಂ, (6) ಕಾಂತೇ.

* ಸುನಾಮಂ – ರಜಗಂ, ಹಂಸಮಾಳೆ – ರರಗಂ ಎಂಬ ಪಾಠಗಳು ಕೆಲವು ಪ್ರತಿಗಳಲ್ಲಿವೆ.

ಮಾಣವಕವೃತ್ತಂ—

1ಕಾಂತಶಶಿವ್ಯೋಮಲಗಂ |
2ಮುಂತಿರೆ ನೀಂ ಕೇಳ್ ಕಳದೀ ||
ಭ್ರಾಂತಿಯೊಳೇಂ 3ನಾಕಿಗನೇಂ |
ದಂತೆ ಪೆಸರ್ **ಮಾಣವಕಂ** ||2|| ||೪೩||

ಚಿತ್ರಪದವೃತ್ತಂ—

ಇಂದು ಯುಗಂಗಳ ಮುಂದಂ |
ಬಂದು ಹರದ್ವಿತಯಂಗಳ್ |
ನಿಂದೊಡೆ **ಚಿತ್ರಪದಂ** ನಾ |
ಮಂ ದಲಿತಾಂಬುಜನೇತ್ರೇ ||3|| ||೪೪||

*ಪ್ರಮಾಣಿಕವೃತ್ತಂ—

ದಿನೇಶ್ವರಾಗ್ನಿ ವಿಷ್ಣು ರು |
ದ್ರನೆಂದಿವೆಲ್ಲ 4ವೊಂದಿ ನಿ ||
ಲ್ಕೆ ನಿಶ್ಚಯಂ 5ಸರೋಜಲೋ |
ಚನೇ **ಪ್ರಮಾಣಿಕಾ** ಹ್ವಯಂ ||4|| ||೪೫||

ಸುಮಾಲತೀವೃತ್ತಂ—

ನರಲಗಂಗಳೊಂದಿ ಯಾ |
ದರದೊಳಿರ್ದೊಡಿಂತಿದುಂ |
ಧರೆಯೊಳಾಸುನಾಮದಿಂ |
ಗುರುಕುಚೇ **ಸುಮಾಲತೀ** ||5|| ||೪೬||

ಶ್ರುತಾನಂದವೃತ್ತಂ—

ಪಾವಕದ್ವಂದ್ವದಿಂ ಮುಂತಂ |
ದೇವದೇವ ದ್ವಯಂ 6ತೋಱಲ್ |
ಕೇವಲಂ ಬಂದೊ7ಡಾ ವೃತ್ತಂ |
ಭಾವನೀಯಂ **ಶ್ರುತಾನಂದಂ** ||6|| ||೪೭||

---

(1) ಶಾಂತೆ, ಕಾಂತೆ, (2) ಮುಂತಿರಲಂತುಂ ಕೆಳದೀ, (3) ನಾಕಿಗನಿಂ। ಕಾಂತಿಯುತೇ (ಪಾ) ಪಿಂಗಳನೆಂ । ದಂತೆ (ವಾ) (4) ರೊಂದಿನಿಲ್ಕೆ, (5) ಪಯೋಜ, (6) ಸಂತಂ, (7) ಡತ್ಯಂತಂ ಪಾವನೀಯಂ.

*ಖರಾಂಶು ವಹ್ನಿವಿಷ್ಣು ರು। ದ್ರರೊಂದಿರಲ್ಕೆ ನಿಶ್ಚಯಂ ॥ ಸರೋಜನೇತ್ರೆ ಕೇಳ ನೀಂ। ಚಿರಂ (ಪ್ರಮಾಣಿಕಾಹ್ವಯಂ (ಪಾ) ಚಿರಂಪ್ರಮಾಣಿಕಂ–ಜರಲಗಂ, ಶ್ರುತಾನಂದಂ–ರರಗಗಂ, ಸುಮಾಲತಿ–ನರಲಗಂ ಎಂಬ ಮೂರು ವೃತ್ತಗಳ ಸಂಗ್ರಹ ಲಕ್ಷಣ ಶ್ಲೋಕಗಳು ಕೆಲವು ಪ್ರತಿಗಳಲ್ಲಿವೆ,

IX ಬೃಹತಿ ಯೆಂಬ ಛಂದದೊಳೊಂಬತ್ತಕ್ಕರಂ ಪಾದವಾಗಿ ಪುಟ್ಟುವ ೫೧೨ ವೃತ್ತಂಗಳೊಳಗೆ—

ಉತ್ಸುಕವೃತ್ತಂ—

ಇಂದುಯುಗಂಗಳ ಮುಂದೆ ಬಂ।
ದೊಂದಿರೆ ವಹ್ನಿ ಪದಾಂತದೊಳ್।
ಸುಂದರಿ [1]ನಾಕಿಗ ನಿಷ್ಟದಿಂ।
ಸಂದುದಿ **ದುತ್ಸುಕ** ನಾಮದಿ (ಕ)ಂ ||1|| ||೪೮||

ಹಲಾಯುಧವೃತ್ತಂ—

*ಪಾವಕಂ ತ್ರಿದಶ ಪಾವಕಂ।
ಭಾವಿಸಿರ್ದೊಡಱಿ ನಾಮದಿಂ ||
ದಾವಗಂ ಸರಸಿಜಾನನೇ।
[2]ಕೇವಲಂ ಬಗೆ **ಹಲಾಯುಧಂ** ||2|| ||೪೯||

ಉದಯವೃತ್ತಂ—

ಕೋಕನದವ್ವೈರಿ ದಿನಪಂ।
ಗಾ ಕಡೆಗೆ ವಾಯು ಬರೆ ಕೇ ||
ಳಾಕಮಲ[3]ಲೋಚನೆ ಪೆಸರ್।
ನಾಕಿಗನಿನಾದು **ದುದಯಂ** ||3|| ||೫೦||

---

(1) ಪಿಂಗಳನಿ, (2) ಕೋಮಲಂ ಮೃದುಹೆಲಾಮುಖೀ, (3) ವಕ್ತ್ರನಿರುತಂ (ಪಾ) ನಿಲೆ...... **ಲೋಚನೆ ಪೆಸರ್**। ಬರ್ಕುಮಿರದೆಂದು ಮುದಯಂ (ಪಾ).

*ಪಾವಕೇಂದ್ರಹುತಭುಗ್ಗಣಂ। ಭಾವಿಸಿರ್ದೊಡಱಿ ನೀಂ ಮಹಾ ||
ದೇವನಿಷ್ಟಮಿದು ನಿಶ್ಚಯಂ। ಶ್ರೀವಿಲಾಸಿನಿ ಧರಿತ್ರಿಯೊಳ್ || (ಪಾ)

ಶ್ರೀವಿಲಾಸಿನಿಯೆಂದು ವೃತ್ತದ ಹೆಸರು-ಹಲಾಯುಧ ವೃತ್ತದ ಲಕ್ಷಣವೇ ಇದರಲ್ಲಿಯೂ ಇರುವುದು

ರನ್ನಸಂ ಹಲಮುಖಿಯಿರಲ್। ಕಿನ್ನರೇಶ್ವರನೆ 4ಸುರಿದಾ।
ರನ್ನಧಾರೆಯಲಿ ಗುಣಸಂ। 5ಪನ್ನ ಪದ್ಮನಿಭನಯನಾ || (ಪಾ)

ಹಲಮುಖಿಯೆಂದು ವೃತ್ತದ ಹೆಸರು (ಒಂದು ಪ್ರತಿಯಲ್ಲಿ ಈ ಸ್ಥಳದಲ್ಲಿ ಈ ಪಾಠವಿದೆ. (ಇದು ಜೈನ ಸಂಪ್ರದಾಯದ ಪಾಠ.)

(4) ಸಲದಾ, (5) ಪನ್ನೆ ಪದ್ಮನಿಭನಯನೆ.

ವನಜವೃತ್ತಂ—

[1]ಆಗಲಗ್ನಿ ಮರುದ್ದ್ವಯ ಸಂ |
ಯೋಗಮಾಗಿರೆ [2]ಭಾವಿಸು ಭೂ ||
ಭಾಗದೊಳ್ ಮೃಗಲೋಚನೆ [3]ನೀಂ |
ನಾಗವರ್ಮನಿ ನೀ **ವನಜಂ** ||4|| ||೫೧||

ವಿನುತವೃತ್ತಂ—

ನನಯುಗಮಿರೆ ಪಾದಪಾ |
ಶನ[4]ವಿದಿರಿರೆ ಬಂದು ಕೋ ||
ಕನದ[5]ನಯನೆ [6]ಲೋಕದೊಳ್ |
**ವಿನುತ** ಮಿದುವೆ ನಾಮದಿಂ ||5|| ||೫೨||

ಭದ್ರಕವೃತ್ತಂ—

ರೌದ್ರವಹ್ನಿ ಸುರಪಾವಕಂ |
ಕ್ಷುದ್ರಮಲ್ಲದಿರೆ ನಾಮದಿಂ ||
**ಭದ್ರಕಂ** ಸರಸಿಜಾನನೇ |
ಸದ್ರಸಂ ಪದನಯಕ್ರಮಂ ||6|| ||೫೩|

ಭುಜಗಶಿಶುಸೃತವೃತ್ತಂ—

[7]ಸೃಜಯಿಸೆ [8]ನನಮುಂ ಮಾದ್ಯ |
ದ್ಗಜಪತಿ ಗಮನೇ [9]ವೃತ್ತಂ ||
ತ್ರಿಜಗದೊಳಿದು ಸಂಸಿದ್ಧಂ |
**ಭುಜಗಶಿಶುಸೃತಂ** ನಾಮಂ ||7|| ||೫೪|

ಮಯೂರವೃತ್ತಂ—

[10]ಅಮರಗಣವಾತ ತೋಯಂ |
ಸಮನಿಸಿರೆ ನಾಮದಿಂದಂ ||
ಗಮಿಸಿತಿದು ನಾಕಿಯಿಂದಂ |
ರಮಣಿಯೞ ನೀಂ **ಮಯೂರಂ** ||8||† ||೫೫|

---

(1) ಪೋಗದಗ್ನಿ ಮರುತ್ತುಗಳಿಂ (ಪಾ) ಆಗಲಗ್ನಿ ಮರುಜ್ಜನನುಂ (ಪಾ) ಮರುಜಲ್ಪ (2) ಸಂದುದುಭೂ, (3) ಕೇಳ್, (4) ಗಣಮಿದೆಯೆನ್ನ, (5) ವದನೆ, (6) ನಾಕಿಯಿಂ. (7) ಸದ್ವ್ರತ ಲಯ ಪದಕ್ರಮಂ(ಪಾ) (8) ನನ ಮಾದುದಾ। ಗಜಪತಿಗಮನೇ (ಪಾ) ನನಮುಂ ಮತ್ತಂ(ಪಾ) ನನಮ ದುದ್ಯಗತಂ॥ ತ್ರಿಜಗದೊಳಿದು ಸಂದುಮು। ಭುಜಗಶಿಶುಗತಂ ವೃತ್ತಂ ॥ (ಪಾ) ಮನುಜಗಶಿಶು ಪ ನ್ನಾಮ (ಪಾ) (9) ಸಂತಂತ್ರಿ ಜಗ (ಪಾ), (10) ಮಮಯಗಣ (ಪಾ).

† ಇಲ್ಲಿ ಮಯೂರಂ—ನಸಯಂ, ಬೃಹತಿ—ಯಯಯಂ (ಎಂದಿದೆ).

ಬೃಹತೀವೃತ್ತಂ—

ಜಲಂ [1]ವಾರಿಯುಂ ವಾರಿಯಿಂದಿಂ |
ತಲಂಕಾರವಾಗಿರ್ದೊಡಿತ್ತಂ ||
ವಿಲೋಲಾಕ್ಷಿ ಕೇಳಿಂತದಕ್ಕುಂ |
[2]ನೆಲಕ್ಕಾ ಬೃಹತ್ಯಾಖ್ಯ ವೃತ್ತಂ ||9|| ||೫೬||

X ಪಙ್ಕ್ತಿಯೆಂಬ ಛಂದದೊಳ್ ಪತ್ತಕ್ಕರಂ ಪಾದವಾಗಿ ಪುಟ್ಟುವ ೧೦೨೪ ವೃತ್ತಂಗಳೊಳಗೆ—

ಪಣವಕವೃತ್ತಂ—

ಭೂನಾಕಾಂತದೊಳಿರೆ – ತೋಯೇಶಂ |
ತಾನೆಂದುಂ ಪಣವಕ – ನಾಮಂ ಕೇಳ್ ||
ನೀನಿಂತೀ[3]ತೆಱನಱ – ದೋದೆಂದುಂ |
ಮೀನಾಕ್ಷೀ[4]ಯತಿ ಗಿರಿ – ಯೊಳ್ ನಿಲ್ಕುಂ ||1|| ||೫೭||

ಮಂದಾನಿಲವೃತ್ತಂ—

ಶೀತಕರೋರ್ವೀ ಮಾರುತ ಜೇತೋ |
ಜಾತಹರರ್ ಬಂದಿರ್ದೊಡ[5]ದೆಂತುಂ ||
ಭೂತಳಕೆಲ್ಲಂ ಸಂದುದಿದೆತ್ತಂ |
ನೀತಿಯುತೇ ಮಂದಾನಿಲ ವೃತ್ತಂ ||2|| ||೫೮||

ಮತ್ತವೃತ್ತಂ—

ಮುನ್ನಂ–ಧಾತ್ರೀ – ಶಶಿಪವನೇಶೋ |
ತ್ಪನ್ನಂ – ನಿಲ್ಕುಂ ಯತಿ ಯುಗದೊಳ್ ಸೇ ||
ವ್ಯಂ ನ – ವ್ಯಂ ಭೂತಳಕಿದು ಪೂಜ್ಯಂ |
ಭಿನ್ನಾ – ಬ್ಜಾಕ್ಷೀ ಪೆಸರಱ[6]ಮತ್ತಂ |3|| ||೫೯||

---

(1) ಕೋಮಲಂ, (2) ನಿಲಂತಾಬ್ಬೃಹತ್ಯಾಖ್ಯವೆಂದುಂ (ಪ) (3) ಕ್ರಮಮಱಮೋ (ಪಾ (4) ಗಿರಿಯತಿಯೊಳ್, (5)ದಮಿಂತೀ (6) ವೃತ್ತಂ(ಪಾ) ಈ ಪಾಠದಲ್ಲಿ ವೃತ್ತದ ಹೆಸರು, ನವ್ಯ ಅಥವಾ ಪೂಜ್ಯ ಎಂದು ಹೇಳಬೇಕು, ಆದರೆ ವೃತ್ತ ರತ್ನಾಕರದಲ್ಲಿ "ಮತ್ತಾ ಜ್ಞೇಯಾ ಮಭಸಗ ಯುಕ್ತಾ" ಎಂದು ಮತ್ತಾವೃತ್ತವೆಂದು ಹೇಳಿರುವುದರಿಂದ ಮೇಲೆ ಕೊಟ್ಟಿರುವ ಪಾಠವೇ ಉಚಿತವು,

ಚಿತ್ರಪದವೃತ್ತಂ—

ಚಂದ್ರಗಣಂಗ – ಳೆ ಮೂಱಿಡೆಯೊಳ್ |
ಚಂದ್ರಧರಂ[2]ಬ – ರೆ ಯಾಕಡೆಯೊಳ್ ||
[3]ಸಾಂದ್ರಯತಿ ಸ್ಥಿ – ತಿ ಪಂಚಮದೊಳ್ |
ಚಂದ್ರಮುಖೀ[4]ಬ – ಗೆ **ಚಿತ್ರಪದಂ** ||4||  ||೬೦||

ಮಣಿರಂಗವೃತ್ತಂ—

ಪಾದವಾಶನ – ಮಾರುತಯುಗ್ಮಂ |
ಪಾದದಂತದೊಳೀಶ್ವರ[5]ನಕ್ಕುಂ ||
[6]ಕಾದಿರಲ್ ಯತಿ – ಭೂತದೊಳಿರ್ದಂ |
[7]ದೋದೆ ಕಲ್ಪವೆ – ಲೇ **ಮಣಿರಂಗಂ** ||5||  ||೬೧||

ಕಲ್ಯಾಣವೃತ್ತಂ—

ಕ್ಷೋಣೀವಾಯುದಿ – ನೇಶ[8]ನೀಶ್ವರಂ |
ಬಾಣಸ್ಥಾನದೊ – ಳಾಗೆ ವಿಶ್ರಮಂ ||
[9]ಜಾಣೇ ನಿಂತಿಳಿ – ಬಂದೊಡಕ್ಕೆ [10]**ಕ** |
**ಲ್ಯಾಣಂ** ಪಂಕಜಲೋಲ ಲೋಚನೇ ||6||  ||೬೨||

XI ತ್ರಿಷ್ಟುಪ್ಪು ಎಂಬ ಛಂದದೊಳ್ ಪನ್ನೊಂದಕ್ಕರಂ ಪಾದಮಾಗಿ ಪುಟ್ಟುವ ೨೦೪೮ ವೃತ್ತಂಗಳೊಳಗೆ—

ಇಂದ್ರವಜ್ರವೃತ್ತಂ—

ವ್ಯೋಮದ್ವಯಂ ಭಾನುಕಪ – ರ್ದಿಯುಗ್ಮಂ |
[11]ತಾಮಾಗಿರಲ್ಕೆಂಟಱೊಳಾ – ವಿರಾಮಂ ||
ಈ ಮಾಟ್ಕೆಯಿಂ[12]ದೋದಿದೊ**ಡಿಂ – ದ್ರವಜ್ರಂ** |
ನಾಮಂ ವಿಲೋಲಾಂಬುರುಹಾ – ಯತಾಕ್ಷೀ ||1||  ||೬೩||

---

(1) ಬರೆ, (2) ಬಱಿಕಾ, (3) ರುಂದ್ರ, ರಂಧ್ರ, (4) ನಿಲೆ, ಬರೆ, (5) ನೊಳ್ಪಿಂ, (6) ಕಾದಲೇ ಯತಿ, (7) ದೋದಿಕೊಳ್ಳಬಲೇ, ದೋದಿಕಲಬಾಲೇ ಮಣಿ, (8) ಶಂಕರಂ, ರುದ್ರನುಂ, (9) ಜಾಣಿಂ ನಿಲ್ತಿರೆ ಸಂ[illegible]ದಲೇ, (10) ಕಲ್ಯಾಣೀ ಪಂಕಜ ಪತ್ರಲೋಚನೆ (ಈ ಪಾಠದಲ್ಲಿ ಕಲ್ಯಾಣಿ ಎಂದು ವೃತ್ತದ ಹೆಸರು) (11) ತಾವಾಗಿ ನಿಲ್ಕೆಂಟಱಿ, (ಪಾ)ಲ್ಕೆಂಟನೆಯೊಳ್, (ಪಾ) ಲ್ಕಯ್ದನೆಯೊಳ್ (ಪಾ) (12) ದೋ ದೆ ಅದಿಂದ್ರ (ಪಾ) ಮಾಡಿದೊಡಿಂದ್ರ.

ಉಪೇಂದ್ರವಜ್ರವೃತ್ತಂ—

ದಿನಾಧಿಪ(ಂ) ವ್ಯೋಮರವೀ – ಶಯುಗ್ಮಂ |
ಘನಂ ನಿಲಲ್ಕೆಂಟಱೊಳಾ – ವಿರಾಮಂ ||
[1]ಪಿನಾಕಿಯುಂ ನಾಕಿಯುಮೆಂ – ದ ಪಾಂಗಿಂ |
ಘನಸ್ತನೇ ಕೇಳಿದು ಪೇಂ – ದ್ರವಜ್ರಂ ||2|| ||೬೪||

ಸೈನಿಕವೃತ್ತಂ—

ಪಾದಪಾಶನಾರ್ಕ – [2]ಪಾವಕಂ ಲಗಂ |
ಪಾದಮಪ್ಪಿನಂ ವಿ – ರಾಮಮಾಱ[3]ಱೊಳ್ ||
ಮೇದಿನೀ [4]ಪ್ರಸಿದ್ಧ – ಮಾಗಿ ನಿಂದೊಡಾ |
ಮೋದ[5]ಗಂಧಿ ಕೇಳ – ದಿಂತು [6]ಸೈನಿಕಂ ||3|| ||೬೫||

ದೋಧಕವೃತ್ತಂ—

ಇಂದುಗಣಂಗಳ – ಮೂಱವಱಿಂದಂ |
ಮುಂದೆ [7]ಗುರುದ್ವಯ – ಮಾಗೆ ವಿರಾಮಂ ||
ಬಂದು [8]ರಸಾಸ್ಪದ – ದೊಳ್ ನಿಲೆ ಸಂಪೂ |
ರ್ಣೇಂದುಮುಖೀ ಬಗೆ ದೋಧಕ ವೃತ್ತಂ ||4|| ||೬೬||

ರಥೋದ್ಧತಾ (ತೆ) ವೃತ್ತಂ—

ಮಾರು ತೇಷ್ಟದಿವಿ – ಜಾಗ್ನಿಯುಂ ಲಗಂ |
ಸಾರೆಯಾಗೆ ರಸ – ದಲ್ಲಿ ವಿಶ್ರಮಂ ||
ದೂರಮಲ್ಲದಿರೆ ಕೇಳ್ ರಥೋದ್ಧತೋ |
ದಾರನಾಮಮೆಸೆಗುಂ [9]ರತೋದ್ಧತೇ ||5|| ||೬೭||

ಚಂದ್ರಿಕಾ (ಕೆ) ವೃತ್ತಂ—

ಅಮರಯುಗಮುಮಗ್ನಿ – ಯುಂ ಲಗಂ |
ಕ್ರಮದಿ ನೊಡನೆ ಬಂದು – ನಿಲ್ಕೆ ವಿ ||
[10]ಶ್ರಮಮದೆಸೆಯೆ[11]ದಿಕ್ಕ್ರು – ದೇಶದೊಳ್ |
ಕಮಲವದನೆ [12]ಚಂದ್ರಿ – ಕಾಹ್ವಯಂ ||6|| ||೬೮||

---

(1) ಸನಾತನೋಕ್ತಂ ಬಹುಕೀರ್ತಿಯುಕ್ತಂ ಘನಸ್ಥಳಿ ಕೇಳ್ ಅದು, (2) ವಹ್ನಿಯುಂ (3) ಱಿಂ, ಮೆಯ್ದಱಿಂ, ಮೂಱಱಿಂ, (4) ವಿಕಾಶವಾಗಿ ನಿಂದೊಡಾ ಮೋದರೂಪೆ, (5) ಗಂಧಿ ಕೇಳವೃತ್ತ, ಗಂಧಿ ಕೇಳಿದೊಂದು, (6) ಶ್ಯೇನಿಕಾ ಎಂದು ಕೆಲವು ಪ್ರತಿಗಳಲ್ಲಿವೆ, (7) ಹರದ್ವಯಮಿರ್ದು (8) ಪದಾಂತದೊಳಿರ್ದೊಡೆ (ಪಾ) ಸಂದುಪದಾ, (9) ರಥೋದ್ಧತೇ (ಸ್ತ್ರೀ ಸಂಬೋಧನೆಯಲ್ಲಿ ಈ ಪಾಠವು ಸಮಂಜಸವಾಗಿಲ್ಲ.) (10) ಶ್ರಮಣಮೆಸೆಯೆ, (11) ದಿಕ್ಸ್ಥಾನದೊಳ್, ಲಕ್ಷದೇಶದೊಳ್, (12) ಕಮಲಕಾಹ್ವಯಂ. (ಈ ಪಾಠದಲ್ಲಿ ಕಮಲವೆಂದು ವೃತ್ತದ ಹೆಸರು)

ಸ್ವಾಗತವೃತ್ತಂ—

ಏಗಳುಂ ಯತಿ ದಿಶಾಗ – ಜದೊಳ್ ನಿಂ |
ದಾಗಳಗ್ನಿ ದಿವಿಜೇಂದು – ಹರರ್ ಸಂ ||
ಯೋಗಮಾಗಿರೆ ಪಯೋರು – ಹವಕ್ತ್ರೇ |
**ಸ್ವಾಗತಂ** ನೆಗಟ್ದಿ[1]ನಾಕಿ – ಗನಿಂದಂ ||7|| ||೭೯||

ಭ್ರಮರವಿಲಸಿತವೃತ್ತಂ—

ಏಮಾತುರ್ವೀ – ಶಶಿ ದಿವಿಜಲಗಂ |
ತಾಮೆತ್ತಂಬಂ – ದಿರೆ ಯತಿ ಚತುರೋ ||
ದ್ದಾಮಂ ವೃತ್ತಂ [2]ಘನಜಘನಯುಗೇ |
ನಾಮಂ ಶ್ರೀಮದ್ – **ಭ್ರಮರವಿಲಸಿತಂ** ||8|| ||೮೦||

ಶಾಲಿನೀವೃತ್ತಂ—

ಭೂಮಿ ವ್ಯೋಮದ್ವಂದ್ವರು – ದ್ರದ್ವಯಂಗಳ್ |
ತಾಮೆತ್ತಂ ಚೆಲ್ವಾಗೆ ಶೈ – ಲಂಗಳೊಳ್ ವಿ ||
ಶ್ರಾಮಂ [3]ನಿಲ್ತಂದಕ್ಕುಮಾ – ನಾಕಿಯಿಂದಂ |
ಭೂಮಿಖ್ಯಾತಂ **ಶಾಲಿನೀ** ನಾಮವೃತ್ತಂ ||9|| ||೮೧||

ಮಾಣಿಕ್ಯವೃತ್ತಂ—

ಕ್ಷೋಣೀವಾಯು [4]ದಿನೇಶ ಶಂಭುಯುಗ್ಮಂ |
ಮೇಣೊಂದಾಗಿರೆ ಬಂದು ನಿಂದೊಡೆತ್ತಂ ||
ಜಾಣೇ ನೀನದ [5]ನೋದು ಬೇಗದಿಂದಂ |
*__ಮಾಣಿಕ್ಯಂ__ ಪೆಸರೆಂಬುದಾಯ್ತು ಚೆಲ್ವಿಂ ||10|| ||೮೨||

ಸಾಂದ್ರವೃತ್ತಂ—

ಚಂದ್ರನಿ ನಭ್ರಂ ಸು – ರಪುರ [6]ಮಾಶರ್ |
ರುಂದ್ರಪದಂ ತಾಂ ರ – ಸಯತಿಯಿಂದಂ ||
**ಸಾಂದ್ರ** ಪದಂ ಕೇಳ್ ಧ – ರೆಯೊಳಿದಕ್ಕುಂ |
ಚಂದ್ರಮುಖೀ ಯೋದಿದನೊಲವಿಂದಂ ||11|| ||೮೩||

---

(1) ಪಿಂಗಳನಿಂದ, (2) ವರವದನಯುತೇ, (3) ನಿಲ್ತಂದಕ್ಕು ಮದ್ಗಂಧಶಾಲೀ। ಶ್ರೀಮದ್ಗಂಧಂ (ಪಾ) ನಿಲ್ತಂದಕ್ಕುಮಾವೃತ್ತಮೆಂದುಂ, ನಾಮುಂ ಕೇಳ್ ಶ್ರೀಗಂಧ ಶಾಲೀವಿತಾನಂ (ಪಾ) ಈ ಪಾಠದಲ್ಲಿ ವೃತ್ತದ ಹೆಸರು ಶ್ರೀಗಂಧಶಾಲೀವಿತಾನವೆಂದು ಆಗುವುದು, ಶ್ರೀಮದ್ಗಂಧಂಶಾಲಿನೀ, (ಪಾ) ಭೂಮಿವ್ಯಾಪ್ತಂಶಾಲಿನೀ (ಪಾ) (4) ಶಂಭುದಿನೇಶ (ಈ ಪಾಠದಲ್ಲಿ ಲಕ್ಷ್ಯವು ಸಂಗತವಾಗಿಲ್ಲ), (5) ನೋಡು. (6) ಮಾಶ। ದ್ವಂದ್ವಪದ ಮಾನನಯತಿಯಿಂದಂ|| ಸಾಂದ್ರ...ಧರೆಯೊಳಿದಕ್ಕುಂ (ಪಾ).

* ಮಾಣಿಕ್ಯಂ-ಮಸಜಗಗಂ, ಸಾಂದ್ರಪದಂ-ಭತನಗಗಂ, ಲಯಗ್ರಾಹಿ-ತತತಗಗಂ, ಸುಮುಖೀ-ನಜಜಲಗಂ, ನೀತಿಕೆ-ನರರಲಗಂ, ಶ್ರೀ ಭತನಗಗಂ (ಎಂದು ಕೆಲವು ಪ್ರತಿಗಳಲ್ಲಿ ಪಾಠವಾಗಿದೆ,)

ಲಯಗ್ರಾಹಿವೃತ್ತಂ—

ವ್ಯೋಮಂ [1]ನಭದ್ವಂದ್ವ ಮಿಾಶದ್ವಯಂಗಳ್ |
ತಾವೊಂದಿರಲ್ಕಾಗಳಂಭೋಜನೇತ್ರೇ ||
ನಾಮಂ **ಲಯಗ್ರಾಹಿ** [2]ಯೆಂದಾಮಹೇಶಂ |
ತಾಮುನ್ನಗೋದ್ಭೂತೆಗಂದೊಲ್ದು ಪೇಳ್ದಂ ||12|| ||೨೪||

XII **ಜಗತಿ ಎಂಬ ಛಂದದೊಳ್ ಪನ್ನೆರಡಕ್ಕರಂ ಪಾದಮಾಗಿ ಪುಟ್ಟುವ ೪೦೯೬ ವೃತ್ತಂಗಳೊಳಗೆ—**

ದ್ರುತವಿಲಂಬಿತವೃತ್ತಂ—

ನಭ[3]ಭರಂಗಳು ವೊಂದಿರೆ – ಪಾದದೊಳ್ |
ಶುಭಕರಂ ಯತಿ ನಿಲ್ತಿರೆ – ರಂಧ್ರದೊಳ್ ||
ಪ್ರಭು ಕವೀಂದ್ರ [4]ಸಹಾಯನಿನಾದುದಿಂ |
ತಿಭಗತೀ **ದ್ರುತಪೂರ್ವ ವಿಲಂಬಿತಂ** ||1|| ||೨೫||

ತೋಟಕವೃತ್ತಂ—

ಪವಮಾನ ಚತುಷ್ಕಯುತಂ ಯತಿಯುಂ |
ದಿವಸಾಧಿಪರೊಳ್ ನಿಲೆ ವಸ್ತು ಕವಿ ||
ಪ್ರವರಸ್ತುತವಪ್ಪುದು **ತೋಟಕ** ಮೆಂ |
ದವಧಾರಿಸು ನೀನಿದನಜ್ಜಮುಖೀ ||2|| ||೨೬||

ಭುಜಂಗಪ್ರಯಾತವೃತ್ತಂ—

ಕುಶಂ ವಾರ್ಧಿಪರ್ಯಾಯಮ – ಕ್ಕುಂ ವಿರಾಮಂ |
ದಿಶಾಸಂಖ್ಯೆಯುಕ್ಕುಂ ಪಯೋ – ಜಾಯತಾಕ್ಷೀ ||
ವಿಶೇಷಂ ಕವೀಂದ್ರಸ್ತುತಂ [5]ನಾಕಿಗಂ ಭೂ |
ಪ್ರಶಸ್ತಂ ಸಮಸ್ತಂ **ಭುಜಂಗಪ್ರಯಾತಂ** ||3|| ||೨೭||

---

(1) ನಭೋಕಾಶಮಿಾಶ (ಈ ಪಾಠದಲ್ಲಿ "ನಭೋಕಾಶ" ಎಂಬ ಸಂಧಿಯು ಸಾಧುವಲ್ಲ. ನಭ ಆಕಾಶ ಎಂದಿರಬೇಕು.) (2) ಯೆಂದಾಯ್ತು ವೃತ್ತಂ ತಾಮುನ್ನಗೋದ್ಭೂತೆಗೊಲ್ದುಪೇಳ್ದಂ, ಯೆಂದಾಮಹೇಶರ್ ........ಪೇಳ್ದರ್, (3) ಭಗಾ.ನಗಕೊಂಬಿರೆ, (4) ಸಹಾಯದೊಳಾದು, **(5)** ಪಿಂಗಳಂಬೋಲ್ (ಪಾ) ನಾಕಿಗಂಬೋಲ್.

ವಂಶಸ್ಥವೃತ್ತಂ—

ದಿವಾಕರಾಕಾಶ[1]ದಿ – ನೇಶಪಾವಕರ್ |
ಸುವಿಶ್ರಮಂ ಬಂದಿರೆ – ಸಪ್ತಸಂಖ್ಯೆಯೊಳ್ ||
ಸವಿಸ್ತರಂ ನಿಲ್ತಿರೆ – ಸಂದುದಿಂತುದಾ |
[2]ತ್ತವಂಶೆ **ವಂಶಸ್ಥ** ಮೆನಿಪ್ಪ ನಾಮದಿಂ ||4|| ||೭೮||

ಇಂದ್ರವಂಶವೃತ್ತಂ—

ವ್ಯೋಮದ್ವಯಂ [3]ಮುಂತೆ ದಿವಾ – ಕರಾಗ್ನಿಗಳ್ |
[4]ತಾಮೊಂದೆ ದಿಗ್ದಂತಿಯೊಳಾ – ಗೆ ವಿಶ್ರಮಂ ||
ಶ್ರೀಮಾನಿನೀ ಸಯ್ಯಡಿಯಾತ[5] ನಿಂತಿದೀ |
ನಾಮೋಪಮಂ [6]ಮಾಡಿದ **ನಿಂದ್ರವಂಶಮಂ** ||5|| ||೭೯||

ಸ್ರಗ್ವಿಣೀವೃತ್ತಂ—

ಜಾತವೇದೋಗಣಂಗಳ್ – ಚತುಸ್ಸ್ಥಾನಸಂ |
[7]**ಜಾತ ಮಾಗುತ್ತು** – ಮಿರ್ದಂದಿದಂ ತೆಂಕನಾ ||
ಡಾತನಿಂ **ಸ್ರಗ್ವಿಣೀ** ವೃತ್ತ – ಮೆಂಬರ್ ಜಗ |
ತ್ಖ್ಯಾತಮಂಭೋಜ ಪತ್ರೋಪ – ಮಾನೇಕ್ಷಣೇ ||6|| ||೮೦||

ನಿರುಪಮವೃತ್ತಂ—

ಸುರಪುರೇಂದು ದಿವಸಾ – ಧಿಪಾಗ್ನಿಗಳ್ |
[8]ಬರೆದಿಶಾಗ ಜದೊಳಾ – ವಿರಾಮಮಾ ||
ಗಿರೆ ಪೆಸರ್ ನೆಗಟ್ದ ನಾಕಿಗೋಕ್ತಿಯೊಳ್ |
**ನಿರುಪಮಂ** ನಿರುಪಮಾನ ವಿಭ್ರಮೇ ||7|| ||೮೧||

---

(1) ದಿನೇಶ್ವರಾಗ್ನಿಗಳ್ । ಸವಿಸ್ತರಂ ಬಂದಿರೆ ಸಪ್ತಸಂಖ್ಯೆಯೊಳ್, ಸುವಿಶ್ರಮಂ ನಿಂತಿರೆ ಸಂದುದಿಂತುದಾ । ರ್ಥವಂತ ವಂಶಸ್ಥಗತಾಭಿಧಾನದಿಂ || (2) ತ್ತವಂಶ ವಂಶಸ್ಥಮಿದುರ್ವಿಭಾಗದೊಳ್, ತ್ತ ವೃತ್ತಮಿಂತೋದು ಶಿಖಾಭಿಧಾನಕಂ (ಈ ಪಾಠದಲ್ಲಿ ಶಿಖಾ ಎಂಬುದು ವೃತ್ತದ ಹೆಸರಾಗುವದು), (3) ಮುಂತೆ ದಿನೇಶಪಾವಕರ್, ಮುಂತೆದಿವಾಕರಾಗ್ನಿಯುಂ, (4) ತಾಮ್ಯಾಗೆ, ತಾಮೊಂದಿ ದಿಗ್ದಂತಿಯೊಳಂದು ವಿಶ್ರಮಂ (ಪಾ) (5) ನಿಂದಿದಂ ಕಾಮೋಪಮಂ, (6) ನೋಡಿದ, (7) ಜಾತಮಾಗುತ್ತಮಿರ್ದಂದಿನಂತಾದೊಡಾ । ಜಾತಮಂ ಸ್ರಗ್ವಿಣೀ, ಜಾತನಿಸ್ರಗ್ವಿಣೀ ವೃತ್ತಮೆಂದಿಂತು ವಿಖ್ಯಾ, (8) ಬರೆ ದಿನೇಶಹಯದೊಳ್ ವಿರಾಮ ಮಾ । ಗಿರೆ ಪೆಸರ್‌ನೆಗಟೆ ಪಿಂಗಳೋಕ್ತಿಯೊಳ್ ನಿರು ॥ (ಪಾ) ಬರೆ ದಿಶಾಗಜಗಳೊಳ್ ವಿರಾಮಮುಂ। ತಿರೆ ಪೆಸರ್ ನೆಗಟ್ಟ ನಾಕಿಯಂತೆ ಪೋಲ್ । ನಿರುಪಮಂ ಕೆಳದಿ ಮತ್ತಕೋಕಿಲಂ (ಪಾ) ಈ ಪಾಠದಲ್ಲಿ ಮತ್ತ ಕೋಕಿಲವೆಂದು ವೃತ್ತದ ಹೆಸರು.

ದ್ರುತಪದವೃತ್ತಂ—

ಶತಮಖೇಂದು ರವಿ [1]ತೋ – ಯಗಣಂ ಪ |
ದ್ಧತಿಯೊಳಾಗೆ ಯತಿ [2]ದಂ – ತಿಯೊಳಕ್ಕುಂ ||
ಶತದಳಾಯತ ವಿಲೋ – ಚನೆ ವೃತ್ತಂ |
**ದ್ರುತಪದಂ** [3]ಮೃದುಪದೋಕ್ತಿಗಳಿಂದಂ ||8|| ||೮೨||

ಲಲಿತಪದವೃತ್ತಂ—

ಕುಲಿಶ ಧರಾರ್ಕಯು – ಗಂಗಳ ಮುಂದಾ(ದಂ) |
ಜಲಗಣ ಮೊಪ್ಪಿರೆ – ಸಂದು ವಿರಾಮಂ ||
ಕುಲಗಿರಿಯೊಳ್ ನಿಲೆ – [4]ನಾಕಿಗನಿಂದಂ |
**ಲಲಿತಪದಂ** ಪೆಸರಿಂ ಲಲಿತಾಂಗೀ ||9|| ||೮೩||

ಹಂಸಮುತ್ತವೃತ್ತಂ—

ಇಂದುಯುಗಾಗ್ನಿ ಪಯೋಗಣಂಗಳಿತ್ತಂ |
ಬಂದಿರೆ ಪಾದದೊಳೊಂದಿ ರಾಜಿಸುತ್ತುಂ ||
ಸುಂದರಿ ನಾಕಿಗನಿಷ್ಟದಿಂದೆ ವೃತ್ತಂ |
ಸಂದುದು ನಾಮದೊಳೊಪ್ಪಿ **ಹಂಸಮುತ್ತಂ** ||10|| ||೮೪||

ಪ್ರವರಾಕ್ಷರವೃತ್ತಂ—

[5]ಪವನಾರ್ಕಮಾರುತ ಸಮೀರಣರೊಂ |
ದುವಿನಂ ವಿರಾಮಮನೆಸೆವಾಱಱೊಳಂ ||
ಕವಿರಾಜಹಂಸಮತದಿಂ ನೆಗೞ್ದೀ |
**ಪ್ರವರಾಕ್ಷರಾ** ಹ್ವಯಮನೋದಬಲೇ ||11|| ||೮೫||

---

(1) ತೋಯಮುವಾಗಲ್, (2) ತೈಲನೊಳಾಗಲ್, ದೊಳಕ್ಕುಂ, (3) ದ್ರುತಪದೋಕ್ತಿ, (4) ಪಿಂಗಳನಿಂದಂ (ಪಾ) ಒಂದು ಹಸ್ತಲಿಖಿತ ಪ್ರತಿಯಲ್ಲಿ, ಹಂಸವಿನಿರ್ಮಿತಂ। ಸಾತಿಶಯೋಕ್ತಿಯ ಬಗೆ ಸೌಂದರಂ – ಎಂದಿದೆ, ಇದು ಹದಿಮೂಱನೆ ಛಂದಸ್ಸಿನ ವೃತ್ತವಾದುದಱಿಂದ ಇಲ್ಲಿ ಗ್ರಂಥ ಪಾತವಿರಬಹುದು, (5) ಪವಮಾನನರ್ಕಮರುತದ್ವಯ ಸಂ। ತವಿರಾಮಮೊಂಬಿನೆಗ ಮೂಱನೆಯೊಳ್ ||.........। ಪ್ರವಿತಾಕ್ಷರಾಹ್ವಮಯನೋದಬಲೇ || (ಪಾ) ಸಂಸ್ಕೃತದಲ್ಲಿ, ಪ್ರಮಿತಾಕ್ಷರಾ ಎಂದು ಹೆಸರಿದೆ,

ಘುಟವೃತ್ತಂ—

ನನಮಯಗಣ ಮಿಂ – ತೀ ನಾಲ್ಕು ಮೆತ್ತಂ |
ಜನಿಯಿಸೆ ಯತಿ ಸ – ಪ್ತ ಸ್ಥಾನ[1]ದಿಂದಂ ||
ನಿನಗಱಪುವೆ ನಿಂ – ತೀಪಾಂಗಿನೊಳ್ ಕಾ |
ಮಿನಿ ಬಗೆ [2]ಘುಟ ಮೆಂ – ದಂ ನಾಗವರ್ಮಂ ||12||* ||೮೬||

ಚಂದ್ರವರ್ತ್ಮವೃತ್ತಂ—

[3]**ಚಂದ್ರವರ್ತ್ಮ** ಕೆಲೆ ಬರ್ಪ ಗಣಚಯಂ |
ರುಂದ್ರ ವಹ್ನಿ ಸುರ ಚಂದ್ರ ಶಿಖಿಸಖಂ ||
ಚಂದ್ರಬಿಂಬಮುಖಿ ಕೇಳಿದಖಿಲಭೂ |
ಪೇಂದ್ರರಿಷ್ಟಮಿದು ನಾಕಿಗನ ಮತಂ ||13|| ||೮೭||

ಜಲೋದ್ಧತವೃತ್ತಂ—

ಗುಣಾಗ್ರಣಿ ದಿನೇಶ[4]ವಾಯುಗಳವೊಂ |
ಪೊಣರ್ಕೆಯೊಳೆ ಕೀಱ ಬಂದೊಡೆ ಗಣಂ ||
ಗುಣಾಭ[5]ರಣೆ ಮುಂ ಪ್ರಸಿದ್ಧಮಿದು ರು |
ಕ್ಮಿಣೀಸದೃಶೆ ಕೇಳ್ **ಜಲೋದ್ಧತಗತಂ** ||14||§ ||೮೮||

---

(1) ಮೊಳಂ, (2) ಫುಟಮೆಂದಂ (ಪಾ) ಈ ಪಾಠದಲ್ಲಿ ವೃತ್ತದ ಹೆಸರು ಫುಟವೆಂದು, (3) ಚಂದ್ರಿಕಾತ್ಮಕರಮಪ್ಪ ಗಣಚಯಂ। ಚಂದ್ರಿಕಾಖ್ಯಮುಸಿರಾಱುನೆಲೆಯೊಳಂ ॥ ರುಂದ್ರವಹ್ನಿ ಸುರ ಚಂದ್ರ ಶಿಖಿ ಸಖಂ। ಚಂದ್ರಬಿಂಬಮುಖಿ ಕೇಳ ಕೆಳದಿ ನೀಂ॥ ಈ ಪಾಠದಲ್ಲಿ ವೃತ್ತಕ್ಕೆ ಚಂದ್ರಿಕೆ ಎಂದು ಹೆಸರು, (4) ವಾಯುಗಳವಱತೊಳ್। ಪೊಣರ್ಕೆಯೊಳೆ ಬಂದೊಡೆ (ಪಾ) ಪತಾಕೆಯೊಳು (?) (ಪಾ), (5) ಣನಿಮಾ, ಣನಿಂ, ಣೆಕೇಳ್, (6) ಜಲೋದ್ಧತರತಂ.

*ಭೂಮಿದ್ವಂದ್ವಕ್ಕತ್ತಲ್ ಜಲದ್ವಂದ್ವಮಿತ್ತಂ। ತಾಮಪ್ಪಂತಿಂಬಾಗಿಲ್ಲಿ ಬಂದೊಪ್ಪೆ ಕೇಳ್ ವಿ॥
ಶ್ರಾಮಂ ಕಾಮಾಸ್ತ್ರ ಸ್ಥಾನದೊಳ್ ನಿಂದೊಡಕ್ಕುಂ। ಕಾಮಪ್ರಾಕಾರೇ ವೈಶ್ವದೇವೀ ಪ್ರಸಿದ್ಧಂ॥
(ಎಂಬ ವೃತ್ತವು ಒಂದು ಪ್ರತಿಯಲ್ಲಿದೆ.)

§ ಕೆಲವು ಪ್ರತಿಗಳಲ್ಲಿ ಈ ಛಂದಸ್ಸಿನಲ್ಲಿ ಈ ವೃತ್ತಗಳಿವೆ– ೧ ನರರಲಗಂ – ನೀತಿಕೆ, ೨. ಭತನಗಗಂ ಶ್ರೀ, ೩. ಭಭರಯಂ – ಹಂಸಮತ್ತಂ, ೪. ನಜನಸಂ–ಪ್ರವರಾಕ್ಷರಂ, ೫. ನನಮಯಂ– ಫುಟಂ, ೬ ರನಭಸಂ – ಚಂದ್ರಿಕೆ ಉಸಿರ್ ಆಱುನೆಲೆಯೊಳ್, ೭. ಮಮಯಯಂ – ವೈಶ್ವದೇವಂ, (ವಿಶ್ರಾಮಂ ಕಾಮಾಸ್ತ್ರದೊಳ್), ೮ ನಯನಯಂ–ಕುಸುಮವಿಚಿತ್ರಂ, ೯. ಜಸಜಸಂ – ಜಲೋದ್ಧತೆ,

XIII ಅತಿಜಗತಿ ಯೆಂಬ ಛಂದದೊಳ್ ಪದಿಮೂಱಕ್ಕರಂ ಪಾದಮಾಗಿ ಪುಟ್ಟುವ ೮೧೯೨ ವೃತ್ತಂಗಳೊಳಗೆ—

ರುಚಿರವೃತ್ತಂ—

ದಿನೇಶ ಚಂದ್ರ ಪವನ ಭಾನು ರುದ್ರರೊಂ |
ದಿ ನಿಲ್ವುದುಂ [1]ವಿಲಸಿತ ಪದ್ಮಲೋಚನೇ ||
ಪ್ರಿನಾಕಿಯುಂ ಗಿರಿಜೆಗೆ ಪೇೞ್ದ ಮಾೞ್ಕೆಯಿಂ |
ಸುನಿಶ್ಚಿತಂ **ರುಚಿರ** ಮಿದಾಗಮೋಕ್ತಿಯಿಂ ||1|| ||೪೯||

ಅಭ್ಯುದಯವೃತ್ತಂ—

ನಗಹರೇಂದುಗಣ [2]ತ್ರಿತ – ಯಂಗಳ ಮುಂ |
ಧಗಲ ದೀಶ್ವರನಿರ್ದೊಡೆ – ವಿಶ್ರಮಣಂ ||
[3]ನೆಗೞ್ದ ನಂದರೊಳೊಂದಿರೆ – ನಾಕಿಗನಿಂ |
ಮೃಗನಿಭೇಕ್ಷಣೇ ನಾಮದೊ [4]**ಳಭ್ಯುದಯಂ** ||2|| ||೫೦||

ಕೋಮಲರುಚಿರವೃತ್ತಂ—

ಸೋಮಗಣಂಗಳೆ ನಾಲ್ಕೆಡೆ – ಯೊಳ್ ಬರೆ ತ |
ತ್ಸೋಮಧರಂ [5]ಬೞಿಕಾಕಡೆ – ಯೊಳ್ ನಿಲೆ ವಿ ||
ಶ್ರಾಮಮದುಂ ನಿಧಿ ಸಂಖ್ಯೆಯೊ – ಳೊಂದಿರೆ ಕೇಳ್ |
ಕೋಮಲೆ **ಕೋಮಲ** ಪೂರ್ವಮಿದುಂ **ರುಚಿರಂ** ||3|| ||೫೧||

ಸೌಂದರವೃತ್ತಂ—

ಇಂದು ನಭೋರ್ಕರೇಂದು ಗ – ಣವ್ರಜಂಗಳ ಮುಂ |
ದಿಂದುಧರಂ ಬಂದಿರೆ – [6]ನಿಂದು ವಿಶ್ರಮ ಮಾ ||
ನಂದದಿನೆತ್ತಂ [7]ಮುನಿ – ಸಂಖ್ಯೆಯೊಳ್ ನೆಗೞಿಂ |
ಸುಂದರಿ ಕೇಳಿಂತಿದು - **ಸೌಂದರಂ** ಪೆಸರಿಂ ||4|| ||೫೨||

---

(7) ವಿಲಸಿತ ಪದ್ಮ ಪತ್ರಲೋ। ಚನೇ ಪಿನಾಕಿ ಯುಮೆಗೆ ॥ (ಪಾ) ಪಿನಾಕಿ ಯಾಗಿರಿಜೆಗೆ (ಪಾ) ವಿಲಸಿತ ಪದ್ಮ ಪತ್ರಲೋ। ಚನೇ ಕರಂ ಸಕಲ ಕವೀಂದ್ರರೊಲ್ಮೆಯಿಂ॥ (2) ತ್ರಿತಯಾಗ್ನಿಹರಂ। ಸೊಗಸಿಕೂಡಿರೆ ನಿಂದೊಡೆ (ಪಾ), (3) ನೆಗೞ್ದ ನಂದದೊಳೊಂದಿರೆ (ಪಾ), ನೆಗೞ್ದಂಬುಧಿಯೊಳ್ ನಿಲೆ ನಾಕಿಗನಿಂ (ಪಾ) ನೆಗೞಿದಂಬುಧಿಯಲ್ಲಿದು ಪಿಂಗಳನಿಂ, (4) ಳಚ್ಯುತಮುಂ (ಪಾ) (ಈ ಪಾಠದಲ್ಲಿ ಅಚ್ಯುತವೆಂದು ಹೆಸರು) ಳಭ್ಯುದಿತಂ (ಪಾ), (5) ಕಡೆಯೊಳ್ ನಿಲೆ ಸಂದುದು ವಿ। ಶ್ರಾಮಮದುನ್ನಿಧಿ ಸಂಖ್ಯೆಯೊಳೊಂದಿರೆ ಕೇಳ್। ಕೋಮಲಮಾದುದಿಂದಗರುಚಂ ಕೆಳದೀ ॥ (ಈ ಪಾಠದಲ್ಲಿ ವೃತ್ತಕ್ಕೆ ಅಂಗರುಚವೆಂದು ಹೆಸರು), ನಿಲೆ ವಿಶ್ರಾಮಮುಮಾಗಿರಿ ಸಂಖ್ಯೆಯೊಳೊಂ...... ಕೋಮಲವೃತ್ತ ಮಿದಂ ನೀಂ ತಿಳಿ ಕೆಳದೀ॥ (ಈ ಪಾಠದಲ್ಲಿ ವೃತ್ತದ ಹೆಸರು ಕೋಮಲವೆಂದು), (6) ಸಂದು ವಿಶ್ರಮಣಾನಂ(ಪಾ) (7) ಮುನಿ ಸಂಖ್ಯೆಯಾದೊಡದಂ। ಸುಂದರಿ ಕೇಳಿಂತಿದು ಸುಂದರಂ ಪೆಸರಿಂ(ಪಾ).

ಪ್ರಭಾತಮಿಶ್ರವೃತ್ತಂ—

ಬಲರಿಪು ಭಾನುಯುಗಂ – ಹುತಾಶನಂ [1]ಪಿಂ |
ಗಲ ಜಟನೆಂಬ ಗಣಂ – ಗಳಿಂದ ಮೆತ್ತಂ||
ನಿಲೆ[2]ವಸು ವಿಶ್ರಮ ಮಾ – **ಪ್ರಭಾತಮಿಶ್ರಂ** |
ಸುಲಲಿತಮೋದಿದ ನ – ಬ್ಜ ಪತ್ರನೇತ್ರೇ ||5|| ||೯೩||

ಮತ್ತಮಯೂರವೃತ್ತಂ—

ಎತ್ತಂ ಧಾತ್ರೀ ವ್ಯೋಮಪಯೋವಾ – ಯು ಹರರ್ಕಳ್ |
ಪತ್ತಿರ್ದಾಗಳ್ ಬಂದು ವಿರಾಮಂ – ನಿಧಿಯೊಳ್ ಮೆ ||
ಯ್ವೆತ್ತೊಪ್ಪುತ್ತಂ [3]ಬಂದಿರೆ ಸಂದಿ – ರ್ದುದು ವೃತ್ತಂ |
ಮತ್ತೇಭೇಂದ್ರೋ[4]ದ್ದಾಮಿನಿ ಕೇಳ್ ಮ – ತ್ತ ಮಯೂರಂ ||6|| ||೯೪||

ಅಂಬುಜವೃತ್ತಂ—

ಅಂಬುಜವಿರೋ – ಧಿ ರವಿ ವಾಯುಗೋಗ್ರಂ |
ಎಂಬ ಗಣಕಮುಂ – ಬರೆ ಮರುತ್ಸಖಯುಕ್ತಂ ||
ಶಂಬರ ವಿರೋ – ಧಿ ಶರದಿಂದೆ ವಿರಾಮಂ |
**ಅಂಬುಜ** ಮಿದೆಂಬುದಿದು [6]ನಾಮಮಂಗನೇ ||7||* ||೯೫||

---

(1) ಪಿಂದಲಸದೆ ಶಂಕರನೆಂಬ ಗಣಾಂತ್ಯದೊಳ್ । .... .ವಸುವಿಂ ಪ್ರಭುವಿತ್ತ ವೃತ್ತ ಮಿದಂ॥ (2) ನಿಲೆವಸುವಿಂಯತಿ ಕೇಳ್ (ಪಾ), (3) ಬಂದಿರಲಾಗಳ್ ಪೆಸರಿಂದಂ । ವೃತ್ತಂ ಸಂದಿರ್ದುದು ॥ (4) ಮುಂತಿರೆ, (5) ದ್ದಾಮಿನಿಯುನ್ಮತ್ತಮಯೂರಂ (ಪಾ) ಮತ್ತಂ ದ್ರೋದ್ದಾಮಿನಿ ಮನ್ಮಥ ಮಯೂ ಂ (ಪಾ) (6) ನಾಮವಿದಗ್ಧೇ.

*ನಜಜಲಗಂ-ಸುಮುಖಿ, ಭತಜಭಗಂ–ಸೌಂದರಿ (ವಿಶ್ರಾಮಂ ಮುನಿ ಸಂಖ್ಯೆಯೊಳ್) ನಜಜರಗಂ–**ಪ್ರಭಾತಂ** (ವಿರಾಮಂ ವಸುವಿಂ) ಸಜಸಜಗಂ ಮಂಜುಭಾಷಿಣಿ, ಭಭಭಭಗಂ – **ಕೋಮಲರುಚಿತಂ** (ವಿಶ್ರಾಮಂ ನಿಧಿ ಸಂಖ್ಯೆಯೊಳ್) ಸಜಸಜಗಂ–ಮಂಗಳಿಕಂ, ಭಜಸಸಗಂ **ಅಂಬುಜಂ** (ಶರದಿಂದೆ ವಿರಾಮಂ) (ಕೆಲವು ಪ್ರತಿಗಳಲ್ಲಿ ಈ ಛಂದಸ್ಸಿನಲ್ಲಿ ಈ ಪಾಠವಿದೆ.)

XIV ಶಕ್ವರಿಯೆಂಬ ಛಂದದೊಳ್ ಪದಿನಾಲ್ಕಕ್ಕರಂ ಪಾದಮಾಗಿ ಪುಟ್ಟುವ ೧೬,೩೮೪ ವೃತ್ತಂಗಳೊಳಗೆ—

**ವಸಂತತಿಲಕವೃತ್ತಂ—**

ವ್ಯೋಮೇಂದು ಭಾನುಗಣಯುಗ್ಮದಿನತ್ತಲಕ್ಕುಂ |
ಸೋಮೇಶ್ವರದ್ವಿತಯಮಂತದಱೊಳ್ ವಿರಾಮಂ ||
ಸಾಮಾನ್ಯ [1]ಮಲ್ಲಿದು *ಪದಾರ್ಥದೊಳನ್ವಿತಾರ್ಥಂ |
ನಾಮಂ [2]**ವಸಂತತಿಲಕಂ** ಕಮಲಾಯತಾಕ್ಷೀ ||1|| ||೯೬||

**ಪ್ರಹರಣಕಲಿತ(ಕ)ವೃತ್ತಂ—**

ನನಭನಲಗ ಮೆಂ – ಬಿವು ಗಣ[3]ನಿವಹಂ |
ಜನಿಯಿಸೆ ಯತಿ [4]ನಿ – ಲ್ತಿರೆ ಹಯತತಿಯೊಳ್ ||
ನಿನಗಿದನಱಿವಂ – ತಿರೆ ವಿರಚಿಸಿದೆಂ |
ವನರುಹವದನೇ [5]**ಪ್ರಹರಣಕಲಿತ(ಕ)ಂ** ||2|| ||೯೭||

**ಕುಸುಮಾಂಘ್ರಿಪವೃತ್ತಂ—**

ತ್ರಿದಶಚಂದ್ರಹುತಾಶನಾ – ನಿಲರುಂ ಲಗಂ |
ಪುದಿದು[6]ಕೊಂಡಿರೆ ವಿಶ್ರಮಂ – ನಿಧಿಯೊಳ್ ಬೆಡಂ ||
ಗೊದವಿ [7]ಬಂದಿರೆ ನಾಗವರ್ಮನಿನಾದುದ |
ಭ್ಯುದಯ ಕಾರಣ[8]ಮೋಪಳೇ **ಕುಸುಮಾಂಘ್ರಿಪಂ** ||3|| ||೯೮||

**[9]ವನಮಯೂರವೃತ್ತಂ—**

§ಬಂದಿರೆ ಶಶಾಂಕ ದಿ – ವಸೇಶ ಮರುದಿಂದ್ರರ್ |
ಮಂದರ ಧರಾತ್ಮ ಜ – ಹೆರರ್ ಕಡೆಯೊಳಿರ್ದಂ ||
ದಿಂದುವದನೇ ಯ – ತಿ ಪದಾರ್ಥದೊಳೆ ನಿಂದಂ |
ದೆಂದುಮಿದು ಕೇಳ ಪೆಸರಿಂ **ವನಮಯೂರಂ** ||4|| ||೯೯||

---

(1) ಮಲ್ಲಮಿದಪಾರ್ಥದೊ (ಪಾ) ಪದಾಂತದೊಳ (ಪಾ) ಮಲ್ಲಿದದು ಪಾರ್ತದೊಳನ್ವಿ (ಪಾ) ದೊಳ್ಪರೆ ಪದಾಂತ್ಯ (ಪಾ), (2) ಈ ವೃತ್ತಕ್ಕೆ ಸಂಸ್ಕೃತದಲ್ಲಿ ಬೇರೆ ಬೇರೆ ಛಂದಶ್ಶಾಸ್ತ್ರಕರ್ತೃಗಳ ಮತದಂತೆ "ಸಿಂಹೋನ್ನತ, ಔದ್ಧರ್ಷಿಣಿ, ಶೋಭಾವತಿ, ಮಧುಮಾಧವಿ" ಎಂದು ಹಲವು ಹೆಸರುಗಳಿವೆ, (3) ನಿಯಮಂ, (4) ತಳ್ತಿರೆ, (5) ಪ್ರಹರಣತಿಲಕಂ, (6) ಬಂದಿರೆ, (7) ನಿಂದಿರೆ, (8) ಮೋದಿದಂ ಕುಸುಮಾಪದಂ, (9) ಕುಟ್ಮಲಮೆಂಬ ವನಮಯೂರಂ,

*ಪದಾರ್ಥ ಯತಿ – ತರ್ಕಶಾಸ್ತ್ರದಲ್ಲಿ "ದ್ರವ್ಯ, ಗುಣ, ಕರ್ಮ, ಸಾಮಾನ್ಯ, ವಿಶೇಷ, ಸಮವಾಯಾಭಾವಾಃ 'ಸಪ್ತ' ಪದಾರ್ಥಾಃ" ಎಂದು ಪದಾರ್ಥಗಳು ಏಳೆಂದು ಹೇಳಿರುವುದರಿಂದ– ಇಲ್ಲಿ ಏಳಕ್ಷರ ಸಂಖ್ಯೆಯಲ್ಲಿ ಯತಿಯೆಂದು ಗ್ರಹಿಸಬೇಕು

§[10]ಬಂದಿರೆ ಸರೋಜರಿಪು ಭಾನುಮರುದಿಂದ್ರಂ। ಮುಂದಿರೆ ಹರದ್ವಯಗಣ್ಣುಂ [11]ನೆರೆದು ನಿಲ್ತಂ।
ದಿಂದುವದನೇ ಯತಿ ಪದಾಂತದೊಳೆ ನಿಂದಂ। ದೆಂದುಮಿದು ಕೇಳ್ ಪೆಸರಿನಿಂ ವನಮಯೂರಂ॥
(ಒಂದು ಪ್ರತಿಯಲ್ಲಿ ಈ ಲಕ್ಷಣ ಪದ್ಯವಿದೆ.)

(10) ಬಂದಿರೆ ಶಶಾಂಕ ಮರು ದಿಂದ್ರದಿವಸೇಶರ್ (ಪಾ) (11) ವಿಮಲಸಂಪೂರ್ಣೇಂದು-ವದನೇ(ಪಾ).

ಸುಂದರವೃತ್ತಂ—

ಶೀತಕರದ್ವಿತಯಂ ಕೃಶಾನು ಮರುಲ್ಲಗೋ |
ಪೇತಮಗೇಂದ್ರದೊಳಾಗೆ ವಿಶ್ರಮಣಂ ಜಗ |
ತ್ಖ್ಯಾತಮಿದಾ ಕವಿರಾಜಹಂಸವಿನಿರ್ಮಿತಂ |
[1]ಸಾತಿಶಯೋಕ್ತಿಯೆ ಸುಂದರಂ ಬಗೆ ಸುಂದರೀ ||5|| ||೧೦೦||

ವಸಂತವೃತ್ತಂ—

ಅಮರಪುರಯುಗಂ – ವ್ಯೋಮಮಾಕಾಶ ಮಾಶರ್ |
ಸಮನಿಸಲುಭಯಂ – ಸಪ್ತ ತಾಣಂ ವಿರಾಮಂ ||
ಕ್ರಮದೊಳಿರಲಿದಂ – ನಾಮದಿಂದಂ ವಸಂತಂ |
ರಮಣಿಯಱಿಯಿದಂ – ನಾಗವರ್ಮೋಕ್ತಿಯಿಂದಂ ||6|| ||೧೦೧||

ಕುಟ್ಮಲಮಯೂರವೃತ್ತಂ—

ಅಂಬುಜರಿಪು – ದ್ಯುಮಣಿ ಮಾರುತ ಬಲಾರಿ |
ತ್ರ್ಯಂಬಕ ಯುಗಂ – ವಿರತಿ ಪಂಚಕದೊಳಿರ್ದಂ ||
ದಂಬುರುಹಲೋ – ಲ ನಯನೇ ಸಕಲ*ವಿದ್ಯಾ |
ಡಂಬರೆ ಸುನಾಮದೊಳೆ ಕುಟ್ಮಲ ಮಯೂರಂ ||7||† ||೧೦೨||

XV ಅತಿಶಕ್ವರಿ ಯೆಂಬ ಛಂದದೊಳ್ ಪದಿನಯ್ದು ಕ್ಕರಂ ಪಾದಮಾಗಿ ಪುಟ್ಟುವ ೩೨,೭೬೮ ವೃತ್ತಂಗಳೊಳಗೆ—

ಮಾಲಿನೀವೃತ್ತಂ—

ಅಮರಗಣಯುಗಂಗಳ್ [2]ಮ – ತ್ತೆ ಭೂತೋಯಯುಗ್ಮಂ |
[3]ಕ್ರಮದಿನಿರೆ ಬೆಡಂಗಂ ತಾ – ಳ್ದು ಬಂದಾ ವಿರಾಮಂ ||
[4]ಸಮುದಿತನವಸಂಖ್ಯಾ ವಿ – ಶ್ರಮಂ ರಂಜಿಸಿರ್ಕುಂ |
ಕಮಲವದನೆ ಸತ್ಯಂ ಮಾ – ಲಿನೀ ನಾಮ ವೃತ್ತಂ ||1|| ||೧೦೩||

---

(1) ಸಾತಿಶಯೋಕ್ತಿಯಿನಾದೊಡಂ ಘುಣ ಸೌಂದರಂ, (2) ಮತ್ತೆ ತೋಯತ್ರಯಂಗಳ್ (ಪಾ) ಮುಂತೆ ಭೂ, (3) ಕ್ರಮದೆ ನಿಲೆ ಬೆಡಂಗಂ ತಾಳ್ದು ಮೇಣಾವಿರಾಮಂ, (4) ವಿಮಲ‡ಮೆಣಿಪು ದೆಂಟೆಂಬಲ್ಲಿ ನಿಲ್ತಂದೊಡಕ್ಕುಂ। ಸಮುದಗಜಗತೀ ಕೇಳ್ ಮಾಲಿನೀ ನಾಮ ವೃತ್ತಂ॥ (ಪಾ) ಸಮುದ ವನಿತೆ ನೀಂ ಕೇಳ್ (ಪಾ),

*ಕಲಾಡಂಬರೆ– ಎಂಬ ಪಾದದಲ್ಲಿ ಕ ಎಂಬುದು ಲಘುವಾಗಿದೆ – ಇದು ಛಂದೋಲಕ್ಷಣಕ್ಕೆ ಭಂಗವನ್ನು ತರುವುದು.

†ಕೆಲವು ಪ್ರತಿಗಳಲ್ಲಿ ಈ ಪಾಠಗಳಿವೆ:—ಭಭರಸಲಗಂ–ಸು(ಸೌ)ಂದರಂ (ವಿಶ್ರಮಣಂ ಅಗೇಂದ್ರ ದೊಳ್), ಭಜಸನಗಗಂ–ವನಮಯೂರಂ (ಯತಿ ಪಂಚ(ಮದೊ)ಮಿಯೊಳ್) (ಯತಿ ವಾರಿಧಿಯೊಳ್),

‡ಮೆನಿಸಲೆಂ, ಮೆಣಿಸಲೆಂ,

ಮಣಿಗಣನಿಕರವೃತ್ತಂ—

ಸುರಪುರಗಣಮೆಸೆ – ದಿರೆ ಜಲನಿಧಿಯೊಳ್ |
ಮರುತನು ಮವಱೊಳೆ – ಬೆರಸಿರೆ ಕುದಿಯೊಳ್ ||
[1]ಸುರಚಿರ ಮಣಿಗಣ – ನಿಕರ [2]ವಿಲಸಿತೇ |
[3]ವಿರಚಿತಮಿದನಱ ಮಣಿಗಣನಿಕರಂ ||2|| ||೧೦೪||

ಮಣಿವಿಭೂಷಣವೃತ್ತಂ—

ಪಾವಕೇಂದ್ರ ಶಶಿಯು – ಗ್ಮದಿನತ್ತ ಹುತಾಶನಂ |
ಭಾವಿಸುತ್ತಿರೆ [4]ಪದಾ – ರ್ಥದೊಳಾಗಿರೆ ವಿಶ್ರಮಂ ||
ಪೀವರಸ್ತನಭರಾ – ನತಮಧ್ಯೇ ಕವೀಂದ್ರ ಸಂ |
ಭಾವಿತಂ [5]ಮಣಿವಿಭೂ – ಷಣ ಮೆಂದಱ ನೀನಿದಂ ||3|| ||೧೦೫||

ಸುಕೇಸರವೃತ್ತಂ—

ಅಮರ ಗಣಾರ್ಕ ಶೀತಕರ ಭಾನುಪಾವಕೋ |
ತ್ತಮ[6]ಗಣಪಂಚಕಂ ನೆರೆಯೆ ಚೆಲ್ವುವೆತ್ತ [7]ವೃ ||
ತ್ತಮನಿದೇಗಳುಂ ಕವಿಗಳೋದುತಿರ್ಪರೆ |
[8]ನ್ನ ಮನಕೆ ಮತ್ತೆ ಕಾಂತೆ ಶುಭದಂ ಸುಕೇಸರಂ ||4|| ||೧೦೬||

ನವನಲಿನವೃತ್ತಂ—

ದಿವಿಜ ದಿನಾಧಿಪ[9]ಯುಗ್ಮ ಶೀತಕರಾಗ್ನಿಯೆಂ |
ದಿವು [10]ನೆರೆದಿಂಬಿನೆ ಬಂದೊಡಾ – ಯತಿ [11]ಹತ್ತಱ ||
ತ್ತವತರಿಸಿದೊರ್ಡ[12]ಮಂಬುಜಾ – ಯತ ಲೋಚನೇ |
**ನವನಲಿನಂ** ಕವಿರಾಜಹಂಸ ವಿನಿರ್ಮಿತಂ ||5|| ||೧೦೭||

---

(1) ಸುರಚಿತ, (2) ವಿರಚಿತೇ, (3) ಸುರುಚಿರ (ಪಾ), (4) ಪದಾಂತ್ಯದೊಳಿರ್ದೊಡೆ (ಪಾ) ಪದಾಂತದೊಳಿದೊಡೆ ವಿಶ್ರಮಂ। ದೇವಿ ಚಾರುನಯನೇ ನುತಕೀರ್ತಿ ಕವೀಂ || (ಪಾ) (5) ರಮಣಿ ಭೂಷಣ (ಕವಿರಾಜ ಮಾರ್ಗದಲ್ಲಿ ಮಣಿವಿಭೂಷ ಎಂದು ಈ ವೃತ್ತದ ಹೆಸರಿರುವುದರಿಂದ ಮೇಲಣ ಪಾಠವೇ ಸಾಧುವೆಂದು ತೋರುವುದು), (6) ಗಣಸಂಚಯಂ ಕಡೆಯೆ (ಪಾ), (7) ವಿಶ್ರಮ ದಿನೇಗಳುಂ, (8) ನ್ನ ಮನಸಿನೋಪೆ ಕಾನ್ತೆಯೇ ಇದುಂ ಸುಕೇಸರಂ (ಪಾ) ರಿಸ್ತು ಮನಕಮ್ಮಂತೆ ಕಾಂತೆ ನಿಸ್ತುಲಂ ಸುಕೇಸರಂ (ಪಾ) ನ್ನ ಮನದವೋಲ್ ನಿತಂಬಿನೀ ಸುರಂಗ ಕೇಸರಂ (ಈ ಪಾಠದಲ್ಲಿ ಸುರಂಗಕೇಸರವೆಂದು ವೃತ್ತದ ಹೆಸರು), (9) ಭಾನು, (10) ನೆವದಿಂದಿರೆ, (11) ಹತ್ತಱಿಂದವತರಿಸಿ ದೊರ್ಡ ಮಿಂತಿಹುದಾಯತ, (12) ಮಿಂತಿದಾಯತ,

ವಿಚಿತ್ರಲಲಿತವೃತ್ತಂ—

[1]ತ್ರಿದಶ ಮರುದಿಂದ್ರ ಪುರಚಂದ್ರ – ಸಲಿಲಂಗಳ್ |
ತುದಿಯೊಳಿರೆ ತಳ್ತು ಹರರಲ್ಲಿ – ಯತಿ ನಿಲ್ಕುಂ ||
ವಿದಿತಮಿದು ಧಾರಿಣಿಯೊಳಬ್ಜ – ದಳನೇತ್ರೇ |
ಸದಮಲ **ವಿಚಿತ್ರಲಲಿತಂ** ಲ – ಲಿತಗಾತ್ರೇ ||6||  ||೧೦೮||

XVI **ಅಷ್ಟಿ** ಯೆಂಬ ಛಂದದೊಳ್ ಪದಿನಾಱಕ್ಕರಂ ಪಾದಮಾಗಿ ಪುಟ್ಟುವ ೬೫,೫೩೬ ವೃತ್ತಂಗಳೊಳಗೆ—

ಮಂಗಳವೃತ್ತಂ—

ಶತಮಖೇಂದು ದಿನಪತ್ರಿತಯಾಗ್ರದೊ[2]ಳೀಗಳುಂ |
[3]ಜಿತಮನೋಭವಗಣಂ ಬರೆ [4]ದಂತಿಯೊಳೊಂದಿ ಪ ||
ದ್ಧತಿಯೊ[5]ಳೊಪ್ಪಿ ಯತಿಯುಂ ನಿಲೆ **ಮಂಗಳ** ನಾಮದಿಂ |
ಕ್ಷಿತಿಗೆ ಸಂದು[6]ದಿದು ನೋಡರವಿಂದದಲೇಕ್ಷಣೇ ||1||  ||೧೦೯||

**ಲಲಿತಪದವೃತ್ತಂ**—

ಕುಲಿಶಧರಪುರ ದಿನಪ – ಮಾರುತ ಹರಾಂತಂ |*
ನೆಲಸಿ ನಿಲೆ ಯತಿ [7]ದಶದೊ – ಳಿರ್ದೊಡೆ ನಿತಾಂತಂ ||
ಸಲೆ ನೆಲಕೆ ಪರೆದುದಿದ – ನೋದಬಲೆ ಸಂತಂ |
**ಲಲಿತಪದ** ಮುಚಿತಪದ – ಯುಕ್ತಮತಿಕಾಂತಂ ||2||  ||೧೧೦||

ಪದ್ಮಮುಖೀ (ಪದ್ಮೆ? ಜಗದ್ವಂದಿತ) ವೃತ್ತಂ—

ಇಂದುಗಣಂ ಶರಸಂಖ್ಯೆ[8]ಯೊಳೊಂದಿರೆ – ಚಂದ್ರಧರಂ |
ಬಂದು ಪದಾಂತದೊಳಿರ್ದೊಡೆ ಭಾಸ್ಕರ – [9]ನೊಳ್ ಯತಿಯುಂ ||
ನಿಂದು [10]ವಿರಾಜಿಸೆ ನಾಕಿಗನಿಂ ಪಡೆ – ದತ್ತು ಜಗ |
[11]ದ್ವಂದಿತಮಂಬುಜಮುಖೀ ನಿಜನಾಮದೆ – **ಪದ್ಮಮುಖಿ** ||3||§  ||೧೧೧||

---

(1) ತ್ರಿದಿವ, (2) ಳಾವಗಂ, (3) ಚ್ಯುತಮನೋಜಹರನುಂ, (4) ಯಂತ್ಯದೊಳೊಪ್ಪಿ, (5) ,ಳಲ್ಲಿ ಯತಿ ತಾಂ ನಿಲೆ ಮಂಗಳಮೆಂಬುದೀ, (6) ದಿದನೋಡರವಿಂದ, (7) ಶರದೊಳಿ, (8) ಗಳೊಳ್ ನಿಲೆ, (9) ನಿಂ ಯತಿಗಳ್ (ಪಾ), (10) ವಿಚಾರಿಸೆ ಪಿಂಗಳನಿಂ ಪಡೆದತ್ತು, (11) ದ್ವಂದಿತ ಮಿಂತಿದ ನೋಡುವುದಿಂಬಿನೆ ಪದ್ಮಮುಖೀ (ಪಾ) ದ್ವಂದಿತ ಮಿಂತಿದು ನೋಡೆಲೆ ಮಾನಿನಿ ಪದ್ಮಮಿದಂ (ಪಾ) ದ್ವಂದಿತಂ ಪದ್ಮಮುಖೀ (ಪಾ).

* ಈ ಪದ್ಯದಲ್ಲಿ ಅಂತ್ಯಪ್ರಾಸವಿದೆ.

§ ಮಂಗಳಂ–ನಭಜಜಗಂ (ಯತಿದಂತಿಯೊಳ್) ಯಮನಸರಗಂ–ವಿಜಯಾನಂದಂ (ಯತಿ ದಿವಸಕರನೊಳ್) ಪಂಚಚಾಮರಂ–ಜರಜರಜಗಂ,

ವಿಜಯಾನಂದವೃತ್ತಂ—

ವನಂ ಧಾತ್ರೀ ಚಕ್ರಂ ಸುರಪ – ಪವನಂ – ಜಾತವೇದಂ |
ಮನೋಜನ್ಮಧ್ವಂಸಂ ಪದದ ಕಡೆಯೊಳ್ – ಚೆಲ್ವನಾಳ್ದಿ ||
ಯ್ದಿ ನಿಲ್ಕುಂ ವಿಶ್ರಾಮಂ ದಿವಸಕರನೊಳ್ – ಕಾಂತೆ ವಿದ್ವ |
ಜ್ಜನಾನಂದಂ ಛಂದಂ ನೆಗೞ್ದ **ವಿಜಯಾನನ್ದ** ಮಕ್ಕುಂ ||4|| ||೧೧೨||

XVII ಅತ್ಯಷ್ಟಿ ಯೆಂಬ ಛಂದದೊಳ್ ಪದಿನೇೞಕ್ಕರಂ ಪಾದವಾಗಿ ಪುಟ್ಟುವ ೧,೩೧,೦೭೨ ವೃತ್ತಂಗಳೊಳಗೆ—

ಮಂದಾಕ್ರಾಂತವೃತ್ತಂ—

ಕಾಂತಂ ಧಾತ್ರೀ [1]ಹಿಮಕೃದಮರಾ – ಕಾಶಯುಗ್ಮೇಶ [2]ಯುಗ್ಮಾ |
ಕ್ರಾಂತಂ ತೋರ್ಕುಂ [3]ಪದದಶಕದೊಳ್—ವಿಶ್ರಮಂ ಸಂತತಂ [4]ಗ್ಗಾಂ ||
ಕಾಂತೇ ಮತ್ತ ದ್ವಿರದಗಮನೇ – ಮಲ್ಲಿಕಾಮೋದಿ **ಮಂದಾ** |
**ಕ್ರಾಂತಂ** ವೃತ್ತಂ ನೆಗೞ್ದುದಿಳೆಯೊಳ್ –[5]ನಾಗವರ್ಮ ಪ್ರಣೀತಂ ||1|| ||೧೧೩||

ಪೃಥ್ವೀವೃತ್ತಂ—

ಇನಾನಿಲ ದಿನೇಶವಾ – ರುತ ಪಯೋಲಗಂಗಳ್ ಬೆಡಂ |
ಗನಾಳ್ದು ನಿಲೆ ವಿಶ್ರಮಂ – ವಸುಗಳಲ್ಲಿ [6]ಚೆಲ್ವಾಗೆ ನೀ ||
ಲನೀರಜ [7]ವಿಲೋಚನೇ– ಬಗೆದು ಕೇಳಿದಂ **ಪೃಥ್ವಿ**ಯೆಂ |
ಬ ನಾಮ[8]ದೊಳಗಿಲ್ಲಿ ಸಂ – ದುದು ನಿರಂತರಂ [9]ಪ್ರೀತಿಯಿಂ ||2|| ||೧೧೪||

ಕನಕಾಬ್ಜಿನೀವೃತ್ತಂ—

ಕುಲಿಶಧರಂ ದಿನೇಶನಮೃತಾಂಶ ದಿನೇಶಯುಗಂ |
ಜಲರುಹನಾಭನಂಗಜವಿಮರ್ದನನೆಂಬ ಗಣಂ ||
ನೆಲಸಿರೆ ನಾಗವರ್ಮ[10]ಕವಿಯಿಂ ಧರೆಗಾಯ್ತು ಪೆಸರ್ |
ಜಲರುಹಲೋಚನೇ ಬಗೆಯ ಕ್ಕೇಳ್ **ಕನಕಾಬ್ಜಿನಿ**ಯುಂ ||3|| ||೧೧೫||

---

(1) ಹಿಮಕರಸುರಾ...... ಜಾತಾಕ್ರಾಂತಂ, (2) ಯುಗ್ಮಂ । ಮುಂತಂ ಬಂದಾ ಪದದ ಕಡೆಯೊಳ್ ಚೆಲ್ವನಾಂತಿರ್ದೊಡಾ ವಿ । ಶ್ರಾಂತಂ ನಿಲ್ಕುಂ ದಶಮದೆಡೆಯೊಳ್ ಯೌವನಾಕ್ರಾಂತೆ ಮಂದಾ । ಕ್ರಾಂತಂ ವೃತ್ತಂ ನೆಗೞ್ದುದಿಳೆಯೊಳ್ ಕದಕಂದರ್ಪನಿಂದಂ ॥ (ಪಾ) (3) ಪದದಶಕದೆಡೆಯೊಳ್ (ಪಾ) ಪದೆದಕಡೆಯೊಳ್, (ಪಾ) (4) ಸುಸ್ಪಾಂತೇ, (5) ಪಿಂಗಳ ಪ್ರೋಕ್ತಿಯಿಂದಂ (ಪಾ) ಸ(ಕ)ಂದಕಂದರ್ಪ ನಿಂದಂ (ಪಾ), (6) ಚೆಲ್ವಾದೊಡಂ। ದು ನೀರಜ (ಪಾ) ನಿಲ್ಲಲ್ ಸವಂ। ತು ನೀರ, (7) ದಳೇಕ್ಷಣೇ, (8) ದಿನಿದಲ್ತೆ (ಪಾ) ದೊಳೆಸಂದುದುಂಮಿಗೆ ನಿರಂತರಂ ಪ್ರೀತಿಯಿಂ, (9) ಪೃಥ್ವಿಯೊಳ್ (ಯಿಂ), 10) ಕವಿನಿರ್ಮಿತಮಾಯತಮಂ। (ಪಾ) ಕವಿನಿರ್ಮಿತಮುಂ ನಿಜದಿಂ ಜಲಜವಿಲೋ,

ಶಿಖರಿಣೀವೃತ್ತಂ—

ವನಂ ಧಾತ್ರೀ ಚಕ್ರಂ –[1]ಸುರಪಪವನಂ ಶೀತಕರನ |
ಬ್ಜನಾಭಂ ಭೂತೇಶಂ – ನೆಲಸಿ ನಿಲೆ [2]ವಿಶ್ರಾಂತಿ ಯುವಱೊಳ್ ||
ಮನಂಗೊಂ[3]ಡಾಱೆಂಬಲ್ಲಿ ನೆಲಸಿರೆ ಕರ್ಣಾಮೃತರಸಂ |
ಜನಾನಂದಂ ಛಂದಂ **ಶಿಖರಿಣಿ** ಮದೇಭೇಂದ್ರಗಮನೇ ||4|| ||೧೧೬||

ಹರಿಣೀಪ್ಲುತವೃತ್ತಂ—

ಕುಲಿಶಧರವಾತೋ – ರ್ವೀ ವೈಶ್ವಾನ ರಾನಿಲರಂತ್ಯದೊಳ್ |
ನೆಲಸೆ ಹರಿಯುಂ –ಕಾಮ [4]ಪ್ರಧ್ವಂಸಿಯುಂ ಯತಿ ಷಟ್ಕದೊಳ್ ||
ನಿಲೆ ಬಗೆದು [5]ಕೇಳ್ – ವೃತ್ತಂ ವೃತ್ತಸ್ತನದ್ವಯರಾಜಿತೇ |
ಲಲಿತ ಹರಿಣೀ – ನೇತ್ರೇ ಕರ್ಣಾಮೃತಂ **ಹರಿಣೀಪ್ಲುತಂ** ||5||* ||೧೧೭||

XVIII **ಧೃತಿ** ಯೆಂಬ ಛಂದದೊಳ್ ಪದಿನೆಂಟೆಕ್ಕರಂ ಪಾದಮಾಗಿ **ಪುಟ್ಟುವ** ೨,೬೨,೧೪೪ ವೃತ್ತಂಗಳೊಳಗೆ—

ಮಲ್ಲಿಕಾಮಾಲಾವೃತ್ತಂ—

ಜ್ವಾಲಿ ವಾಯು ದಿನೇಶಯು – ಗ್ಮ ಶಶಾಂಕ ಪಾವಕರೆಂಬಿವರ್ |
[6]ಲೀಲೆಯಿಂ ಬರೆ ವಿಶ್ರಮಂ - ವಸುಸಂಖ್ಯೆಯೊಳ್ ನಿಲೆ ಭಾಮಿನೀ ||
ನೀಲಲೋಲಸಹಸ್ರ ಕುಂ – ತಳೆ ಸಂದುದಿಂತಿದು [7]**ಮಲ್ಲಿಕಾ** |
**ಮಾಲೆ** ಯೆಂ[8]ಬುದು ನಿಶ್ಚಯಂ ಕವಿರಾಜ ಹಂಸವಿನಿರ್ಮಿತಂ ||1|| ||೧೧೮||

---

(1) ತಿದಶ, ತ್ರಿಶರ, (2) ವಿಶ್ರಾಂತಮುವ, (3) ಡಾಱೆಂಬೀಯೆಡೆಯೊಳಿಸಿರೆ (ಪಾ) ಡಿಂತಾಱೆಂ ಬೆಡೆಯೊಳಿರೆ, (4) ಪ್ರಧ್ವಂಸನುಂ ಭೂಷಟ್ಕೆ, (5) ದುಳಿತ್ತಂ ವೃತ್ತ (ಪಾ) ಕೇಳಿತ್ತಂ ವೃತ್ತಂ, (6) ಲೀಲೆಯಿಂ ದಶಸಂಖ್ಯೆಯೊಳ್ ನಿಲೆ ವಿಶ್ರಮಂ ನೆಱೆ ರಂಜಿಕುಂ । ಲೋಲನೀಲ ಸರೋಜ(ಕುಹಸ) ಕುಂತಳೆ ಜಾಲ ಶೋಭಿತೆ ಮಲ್ಲಿಕಾ । ಮಾಲೆಯೆಂಬುದನೋದಿದುಂ ಕವಿರಾಜ ಹಂಸ ವಿನಿರ್ಮಿತಂ ॥ (7) ಮಲ್ಲಿಕಾ ಲೋಲನೀಲ, (8) ದುವಿಶ್ರುತಂ (ಪಾ) ದಸಂತಿದಂ ಕವಿರಾಜ ರಾಜವಿನಿರ್ಮಿತಂ.

*ಒಂದು ಪ್ರತಿಯಲ್ಲಿ ವೃತ್ತವೊಂದರ ಲಕ್ಷಣಲಕ್ಷ್ಯಗಳ ಅಶುದ್ಧ ಪಾಠವುಳ್ಳ ಈ ಪದ್ಯವಿದೆ—

ಸುರನಿಲಯಂ ದಿನೇಶ ಶಶಿಭಾನು ಯುಗಾಂತ್ಯಲಗಂ ।
ಬರೆ ಯತಿ ಪಾದದಂತ್ಯದೊಳಿರಲ್ ಮಕುಟಾಖ್ಯಮಿದಾ ॥
ಗಿರಿ ಶರ ವಿಶ್ರಮಂ ನೆಲಸಲಪ್ಪುದು ಕೋಕಿಲಕಂ ।
ವಿರಚಿತವಾಯ್ತಿದುಂ ಕುಡಿತೆಗಂಗಳೆ ಯಬ್ಜಮುಖೀ ॥

ಈ ಪದ್ಯದಲ್ಲಿ ಹೇಳಿರುವ ವೃತ್ತದ ಹೆಸರು ಮಕುಟಕವೆಂದು, ಇದು ಕನಕಾಬ್ಜಿನೀ ವೃತ್ತದ ಲಕ್ಷಣವೇ ಆಗಿದೆ, ಮತ್ತು ಗಿರಿಶರದಲ್ಲಿ ಯತಿ ಬಂದರೆ ಕೋಕಿಲವೆಂದು ವೃತ್ತದ ಹೆಸರಾಗುವುದೆಂದೂ ಉತ್ತರಾರ್ಧದಲ್ಲಿ ಹೇಳಿದೆ. ಕೆಲವು ಪ್ರತಿಗಳಲ್ಲಿ ಈ ಛಂದಸ್ಸಿನಲ್ಲಿ— 1 ಯಮನ ಸಭಲಗಂ – ಶಿಖರಿಣಿ (ವಿಸ್ರಮಂ ಆಱೆಂಬಲ್ಲಿ), 2. ನನನ ನನಗಗಂ – ವನಜದಳಂ, 3. ನಜಭಜಜಲಗೆಂ - ಕನಕಾಬ್ಜನೀಯಂ ಎಂದು ಇದೆ

ಆನಂದಕಂದರ್ಪಜಾತವೃತ್ತಂ—

ಭೂಮಿ ವ್ಯೋಮಾಂಕಂ – ದಿವಿಜ[1]ನಿಲಯಂ ಮುನ್ನೆ ತೋಯತ್ರಯಂಗಳ್ |
ತಾಮೆತ್ತಂ [2]ಬಂದೊಂ – ದಿರೆ ವಿರತಿ ಕಾಮಾಸ್ತ್ರದೊಳ್ [3]ನಿಂದೊಡಕ್ಕುಂ ||
ಕ್ಷೇಮಾರೋಗ್ಯಂ ಕೇಳ್ – ನಿನಗಿದು[4]ಚಿತಾ**ನಂದ ಕಂದರ್ಪಜಾತಂ** |
ನಾಮಂ ಪ್ರೋದ್ದಾಮಂ – ಕುಸುಮಿತಲ[5]ತಾವಲ್ಲಿ ಪಂಕೇಜನೇತ್ರೇ ||2||* ||೧೧೯||

ಅರವಿಂದವೃತ್ತಂ—

ಸುರಪುರಯುಗ ಪವನ – ದ್ವಿತಯಾಕಾಶಾಂಬುಗಣಂಗಳ್ |
ನೆರೆದಿರೆ ಯತಿ ನಿಧಿಯೊಳ್ – ಸಲೆ [6]ಕೇಳಾನಂದದಿನೆಂದುಂ ||
ನಿರತಿಶಯಮೊಳಿದ ನೋ – ಡೆಲೆ [7]ನೀಲಾಬ್ಜೇಕ್ಷಣೆ ನೀನೀ |
ಸುರುಚಿರಮೆನಿಪದೆ ದಲ್ ಪೆಸರಿಂದಂ ತಾ**ನರವಿಂದಂ** ||3||† ||೧೨೦||

XIX **ಅತಿಧೃತಿ** ಯೆಂಬ ಛಂದದೊಳ್ ಪತ್ತೊಂಬತ್ತಕ್ಕರಂ ಪಾದಮಾಗಿ ಪುಟ್ಟುವ ೫,೨೪,೨೮೮ ವೃತ್ತಂಗಳೊಳಗೆ—

ತರಳವೃತ್ತಂ—

ಸುರಪ ಶೀತಕರಾಗ್ನಿ – ಮಾರುತ ಭಾನುಯುಗ್ಮಗಣಂಗಳಿಂ |
[8]ತರದೊಳೊಪ್ಪೆ ಹಿಮಾಂಶು – ಶೇಖರ[9]ನಿರ್ದ್ದ ವಿಶ್ರಮಣಂ ದಿಶಾ ||
[10]ಕರಿಯೊಳಾಗಿರೆ ಸಂದುದಿಂತಿದು ನಾಗವರ್ಮವಿನಿರ್ಮಿತಂ |
ತರಳಲೋಚನೆ ನಾಮ – ದಿಂ **ತರಳಂ** ಕವೀಂದ್ರಜನಸ್ತುತಂ ||1|| ||೧೨೧||

---

(1) ಪುರಮುಂ, (2) ಚೆಲ್ಪಿಂದಿರೆ, (3) ಸಂದು ನಿಲ್ಕುಂ, (4) ಚಿತಂನೆಂದ (ಪಾ) ಚಿತಂ ಕಂದಕಂದರ್ಪ, (5) ಲತಾಮಾಲೆ (ಪಾ) ಲತಾವೇಲ್ಲಿತಂಕಂಜ (ಪಾ) (6) ನಿಲ್ತಾನಂದ, (7) ನೀಲಾಬ್ಜಾಂಬ(ಕಿ)ಕೆ ನೀನುಂ, (8) ತರದೊ... ಸಮುಸಂದಿರ್ದಲ್ಲರು ಮಿರ್ದಂ। ದಿರದಿದ ನೊಸೆದು ಬುಧೋತ್ತಮರೆಂಬಾಗಳುನೋದು। ತ್ತಿರೆ ಸರಸಿಜನಿಭನಯನೇ ಪೆಸರಿಂದಂ ತಾನರವಿಂದಂ॥ (ಪಾ) (9) ನಾಗೆ, (10) ಗಿರಿಗಳೊಳ್ ನಿಲೆ ನಾಗವರ್ಮ ಕವೀಂದ್ರ ನಿರ್ಮಿತಮಿಂತಿದಂ.

* ಟಿ॥ ಈ ಪದ್ಯದಲ್ಲಿ ವೃತ್ತದ ಹೆಸರು ಆನಂದಕಂದರ್ಪಜಾತಂ, ಅಥವಾ ಕಂದಕಂದರ್ಪಜಾತಂ ಎಂದು ಎರಡು ಬಗೆಯ ಪಾಠಗಳಿರುವುವು, ವಿಚಾರ ಮಾಡಿದರೆ - ಹೆಸರು ಇವಕ್ಕಿಂತ ಬೇರೆಯೆಂದು ತಿಳಿದುಬರುವುದು,ಕೊನೆಯ ಪಾದದಲ್ಲಿರುವ 'ಕುಸುಮಿತಲತಾವಲ್ಲಿ' ಎಂಬ ಪದಕ್ಕೆ ಅನ್ವಯವಿಲ್ಲ, ಇದು ಸಂಬೋಧ್ಯೆಯಾದ ಹೆಂಗಸಿಗೆ ಅನ್ವಯಿಸುವುದಿಲ್ಲ, ಹಾಗೆ ಅನ್ವಯಿಸಲು 'ಕುಸುಮಿತಲತಾವಲ್ಲೀ' ಎಂದು ತಿದ್ದಬೇಕು, ಇದಕ್ಕಿಂತ 'ಕುಸುಮಿತಲತಾವೇಲ್ಲಿತಂ ಕಂಜನೇತ್ರೆ' ಎಂದು ತಿದ್ದಿ ಈ ವೃತ್ತದ ಹೆಸರನ್ನು 'ಕುಸುಮಿತಲತಾವೇಲ್ಲಿತವೆಂದು ಹೇಳಿ ಕಂದಕಂದರ್ಪಜಾತಂ' ಎಂಬ ಪದಕ್ಕೆ ಕಂದಕಂದರ್ಪನೆಂಬ ಬಿರುದುಳ್ಳ ನಾಗವರ್ಮನಿಂದ ಆದುದು ಎಂದು ಹೇಳುವುದು ಸಮಂಜಸವಾಗಿದೆ.

† ಕೆಲವು ಪ್ರತಿಗಳಲ್ಲಿ ಈ ಪಾಠವಿದೆ— ಸನಜನಭಸಂ - ಹಂಸಕಂ, ಮತನನ ಯಯಯಂ - ಕಂದರ್ಪಜಾತಂ (ವಿರತಿ ಕಾಮಾಸ್ತ್ರದೊಳ್).

**ಮೇಘವಿಸ್ಫೂರ್ಜಿತವೃತ್ತಂ—**

ವನಕ್ಷ್ಮಾ ನಾಕೇಂದ್ರಂ ಹುತವಹಸಖಂ – ವಹ್ನಿಯುಗ್ಮಂ ವಿರೂಪಾ |
[1]ಕ್ಷನೆಂಬೀ ಸಂದೋಹಂ ನೆಲಸಿ ನಿಲೆ ಮಾ – ರ್ತಂಡರೊಳ್ ವಿಶ್ರಮಂಗಳ್ ||
ಮನಂಗೊಂಡಿರ್ದಾಗಳ್ ಚಕಿತಹರಿಣೀ – ನೇತ್ರೆ ಲೋಕಪ್ರಸಿದ್ಧಂ |
[2]ಜನಖ್ಯಾತಂ ನೂತ್ನಂ ಬುಧಜನಹಿತಂ **ಮೇಘವಿಸ್ಫೂರ್ಜಿತಾಖ್ಯಂ** ||**೨**|| ||೧೨೨||

**ಶಾರ್ದೂಲವಿಕ್ರೀಡಿತವೃತ್ತಂ—**

ಉರ್ವೀಮಾರುತ ಭಾಸ್ಕರಾನಿಲವಿಯ – ದ್ದ್ವಂದ್ವಂ ಪದಾಂತಂಗಳೊಳ್ |
ಶರ್ವಂ ವಿಶ್ರಮಣಂ ದಿನೇಶರೆಡೆಯೊಳ್ – ನಿಲ್ಕುಂ ಮನಂಗೊಳ್ವಿನಂ ||
[3]ನಿರ್ವಾದಂ ಭುವನತ್ರಯಂಗಳೊಳಗೀ – ವೃತ್ತಂ ಪ್ರಸಿದ್ಧಂ ಕರಂ|
ಚಾರ್ವಂಭೋರುಹ ಪತ್ರನೇತ್ರೆ [4]ಪೆಸರಿಂ **ಶಾರ್ದೂಲವಿಕ್ರೀಡಿತಂ** ||3|| ||೧೨೩||

**ಖಚರಪ್ಲುತವೃತ್ತಂ—**

ವಾತಮಿತ್ರಮರುತ್ಪವನಂ ವ್ಯೋಮಾರ್ಕಯುಗಂ ತ್ರಿ – ಪುರಾಂತಕೋ |
ಪೇತಮಾಗಿರೆ ವಿಶ್ರ[5]ಮಂ ತಾಂ ಪಕ್ಷದೊಳೊಂದಿರೆ ನಾಮದಿಂ ||
ಶಾತಕುಂಭಘಟೋಪಮವೃತ್ತೋತ್ತುಂಗಪಯೋ[6]ಧರಯುಗ್ಮೆ ಧಾ|
ತ್ರೀತಳಕ್ಕೆಸೆದತ್ತಿದುಂ ಲೋಕಾನನ್ದಕರಂ **ಖಚರಪ್ಲುತಂ** ||4||* ||೧೨೪||

XX **ಕೃತಿ**ಯೆಂಬ ಛಂದದೊಳಿಪ್ಪತ್ತಕ್ಕರಂ ಪಾದಮಾಗಿ **ಪುಟ್ಟುವ** ೧೦,೪೮,೫೭೬ ವೃತ್ತಂಗಳೊಳಗೆ—

**ಮತ್ತೇಭವಿಕ್ರೀಡಿತವೃತ್ತಂ—**

ಶ್ವಸನೇಂದು [7]ಜ್ವಲನಂ ದಿವಂ ಧರೆ ಜಲಂ – ದೈತ್ಯಾರಿ ಕಾಮಾಂತಕ |
[8]ಪ್ರಸರೋದ್ಯದ್ಗಣದಿಂ ತ್ರಯೋದಶಯತಿ – ಪ್ರಸ್ತಾರಮಾಗಿರ್ದೊಡೀ ||
ವಸುಧಾಚಕ್ರ ದೊ[9]ಳೊಲ್ದು ನಂದುದು ಕರಂ – **ಮತ್ತೇಭವಿಕ್ರೀಡಿತಂ** |
ಪೆಸರಾಯ್ತೆಂತಿದು[10]ನಾಗವರ್ಮ ಕವಿಯಿಂ ವ್ಯಾಲೋಲ ನೀಲಾ[11]ಳಕೇ ||1||೧೨೫||

---

(1) ಕ್ಷನಂ ತಂಸಂತಂ ತಾಂ ನೆಲಸಿ, (2) ಜಿನಖ್ಯಾತಂ ನಾಮಂ(ಪಾ) ಜಿನಖ್ಯಾತಂ ಕೇಳ್ ನೀಂ ಬುಧಸಮಿತಿಗಂ (ಪಾ), (3) ನಿರ್ವ್ಯಾಜಂ (ಪಾ) ನಿರ್ವಂದಂ (ಪಾ), (4) ವಿಲಸಚ್ಛಾರ್ದೂಲ, (5) ಮಣಂಗಳ್ ಪಕ್ಷ, (6) ಧರರಾಜಿತೇ। ಭೂತಲಕ್ಕೆ ಸೆದಿರ್ದಿದುಂ (ಪಾ) ತಲಕ್ಕೆಸೆವಂತಿದುಂ (ಪಾ) ಧಾತ್ರೀ। ತಳಕ್ಕಿದೆಸೆದಂದು, (7) ಜ್ವಲನಾಮರಾವನಿ (ಪಾ) ಜ್ವಲನಾಕಮಾವನಿ (ಪಾ) ಜಲವಾವನಿ ಜಲಂ (ಪಾ), (8) ಪ್ರಸವೋದ್ಯದ್ಗಣಮುಂ (ಪಾ), (9) ಳೆಯ್ದೆ, (10) ಪಿಂಗಳಾಹಿವರನಿಂ, (11) ಅಳಕೇ,

* ಯಮನಸರರಗಂ ಮೇಘವಿಸ್ಫೂರ್ಜಿತಂ, ರಸಸತಜಜಗಂ ಖಚರಪ್ಲುತಂ (ವಿಶ್ರಮಣಂ ಪಕ್ಷದೊಳ್).

ಅನವದ್ಯವೃತ್ತಂ—

ಅನಿಮಿಷೇಂದ್ರಪುರಂ ಶಶಿಯುಗ್ಮಂ –[1]ಭೂತಳ ವಾಯುಯುಗಂಗಳಿಂ |
ವನಜ [2]ಲೋಚನ ನೀಶನುಮೆಂತುಂ – ನಿಲ್ತಿರೆ ರುದ್ರರ ಸಂಖ್ಯೆಯೊಳ್ ||
[3]ವಿನಮಿತಂ ಯತಿ ನಿಂದಿರೆ [4]ವೃತ್ತಂ ವೃತ್ತಪಯೋಧರ ರಾಜಿತೇ |
ಕನಕತುಂಡಲ ಮಂಡಿತಗಂಡೇ –[5]ನೀನಿದನೋದನವದ್ಯಮಂ ||2|| ||೧೨೬||

ಉತ್ಪಲಮಾಲಾವೃತ್ತಂ—

ಶೀತಕರಾನಲೇಂದ್ರಪುರ ಚಂದ್ರ – ಶಶಾಂಕ ಹುತಾ[6]ಶನರ್ ಲಗೋ |
ಪೇತಮೊಡಂಬಡುತ್ತುಮಿರೆ ರುದ್ರ – ರ ಸಂಖ್ಯೆಯೊಳಾಗೆ ವಿಶ್ರಮಂ ||
ಸಾತಿಶಯೋಕ್ತಿ[7]ಯಿಂದಿದು ವಿರಾಜಿ – ಸುಗುಂ ಕವಿರಾಜಹಂಸನಿಂ |
ಭೂತಳದೊಳ್ ನೆಗೞ್ತೆವಡೆದುತ್ಪ–ಲಮಾಲೆ ವಿಲೋಲಲೋಚನೇ ||3|| ||೧೨೭||

ನಗರಂಜಿತವೃತ್ತಂ—

ರಾಜಚತುಷ್ಟಯ[8]ಮೆಂಬಗಣಂಗಳೆ ಪಾವಕಾನಿಲ[9]ರತ್ತಲ್ ಮ |
ತ್ತೋಜೆ[10]ಯೊಳೋತು ಹರೀಶ್ವರರೊಂದಿರೆ ವಿಶ್ರಮಂ ದಿನನಾಥ[11]ನೊಳ್ ||
ರಾಜಿಸುತುಂ ನಿಲೆ ನಾಕಿಗ[12]ನಿಂದುರು – ರೂಢಿವೆತ್ತಿರೆ ಸಂದುದಿಂ |
ತೀಜಗದೊಳ್ [13]ನಗರಂಜಿತಮೆಂಬುದು – ರಂಜಿತಾಧರ ಪಲ್ಲವೇ ||4||* ||೧೨೮||

XXI ಪ್ರಕೃತಿ ಯೆಂಬ ಛಂದದೊಳಿಪ್ಪತ್ತೊಂದಕ್ಕರಂ ಪಾದಮಾಗೆ ಪುಟ್ಟುವ ೨೦,೯೭,೧೫೨ ವೃತ್ತಂಗಳೊಳಗೆ—

ಚಂಪಕಮಾಲಾವೃತ್ತಂ—

ತ್ರಿದಶರವೀಂದು ಭಾಸ್ಕರ ಗಣತ್ರಿತ – ಯಾಗ್ರದೊಳಗ್ನಿ ಚೆಲ್ವುವೆ |
ತ್ತುದಯಿಪಿನಂ ತ್ರಯೋದಶ[14]ದೊಳೊಂದಿರೆ – ವಿಶ್ರಮಣಂ ನಿರಂತರಾ ||
ಭ್ಯುದಯ [15]ಪರಂಪರಂ ನಿನಗಶೋಕಮಾ – ಹೀಮಹ ಪಲ್ಲವೋಲ್ಲಸ |
ತ್ಪದಯುಗೆ[16]ನಿಚ್ಚವೋದು ಗಡ ಚಂಪಕಮಾಲೆಯು[17]ನೊಲ್ದು ಲೀಲೆಯಿಂ ||1|| ||೧೨೯||

(1) ಧಾರಿಣಿವಾತ, (2) ನಾಭನು ಮಿಾಶನು ಮೊತ್ತಂ ಬಂದಿರೆ, ರಂಧ್ರ (ಪಾ) ರುದ್ರಸು (ಪಾ) ರುದ್ರಪ, (3) ವಿನಿಹಿತಂ ಯತಿ ನಿಲ್ತಿರೆ, (4) ವೃತ್ತೋತ್ತುಂಗಪಯೋ(ಪಾ) ವೃತ್ತಂ ವೃತ್ತಪಯೋ(ಪಾ), (5) ನೀನಱಿದೋದನವದ್ಯನಂ (ಪಾ) ಪೇೞ್ದುದು ನೋಡನವದ್ಯಮಂ (ಪಾ) ನೀನಱಿದೋದರ ವಿಂದಮಂ (ಪಾ) ಈ ಪಾದದಲ್ಲಿ ಅರವಿಂದವೆಂದು ವೃತ್ತದ ಹೆಸರು, (6) ಶನಂ ಲ, (7) ಯಂತಿದು, (8) ಮೋಳಿಯೊಳ್ಳೆತರೆ (ಪಾ) ಮೋಳಿಯೆ ಬಂದಿರೆ ಪಾವಕಾನಿಲರತ್ತ ಮು| ತ್ತಾಜಿಯೊಳಾ ಹರೀಶ್ವರದೊಂದಿರೆ॥ (9) ರಲ್ಲಿ, (10) ಯಾಳೊಂದಿ ಹರೀಶ್ವರರಾಗಿರೆ (ಪಾ), (11) ರೊಳ್ (12) ನಿಂತಿದು ಮೋಳಿವೆತ್ತಿರೆ ಸಂದುದಿಂ। ತೀಜಗದೊಳ್ (ಪಾ), (13) ವನಮಂಜರಿ (ಪಾ) ಈ ಪಾದದಲ್ಲಿ ವೃತ್ತದ ಹೆಸರು ವನಮಂಜರಿಯೆಂದು— ವನವಲ್ಲರಿ (ಪಾ) ನಾಗರಂಜಿತಂ (ಪಾ) ನಗರರಂತೆಲಂಬುದ (ಪಾ), (14) ದೊಳಾಗಿರೆ, (15) ಕರಂಕರಂ, (16) ನಿಚ್ಚಲೋದು, (17) ನೆತ್ತಿ (ಪಾ) ನರ್ದ್ಧಿ (ಪಾ).

* ನಭಭಮಸನಗಂ - ಅನವದ್ಯಂ, ( ವಿಶ್ರಮಂ ರುದ್ರಸಂಖ್ಯೆಯೊಳ್,), ರನರನರನರಂ - (ನಾಗರಂಜಿತ ವಿಶ್ರಮಂ ದಿನನಾಥರೊಳ್).

## ಗದ್ಯಂ

ಇದು ಸಕಲಸುರಾಸುರೇಂದ್ರ ಮಣಿಮಕುಟ ಘಟಿತ ‡ಶ್ರೀಮತ್ಪರಮೇಶ್ವರ
ಚಾರು ಚರಣಾರವಿಂದ ಮರಂದ ಮಧುಕರಾಯಮಾಣ
ವಿಬುಧಜನಮನಃ ಪದ್ಮಿನೀರಾಜಹಂಸ
**ಶ್ರೀಮತ್ಕವಿರಾಜಹಂಸ**
ವಿರಚಿತಮಪ್ಪ
**ಛಂದೋಂಬುಧಿಯೊಳ್**
[1]ಕರ್ಣಾಟ ವಿಷಯಜಾತಿವೃತ್ತ ಪ್ರಕರಣಂ
**— ಪಂ ಚ ಮಾ ಧಿ ಕಾ ರಂ —**



---

(1) ತ್ರಿಪದ್ಯಾದಿ ಲಕ್ಷಣಂ ಪಂಚಮ ಪ್ರಕರಣಂ.

ಸಾದರಮಿಂತಾಱಡಿಯೊಳ್ ಗುಣಿಯಿಸೆ।
ಶೋಧಿಸೆ ಲಘು ನೂಱುಂ ಪದಿನಾಱಕೆಲೆ।
ಕಾದಲೆ ಕೇಳಿಂತಿದು ನಿಶ್ಚಯು ಪರಿವರ್ಧಿನಿ ಷಟ್ಪದಿಗೆ ॥ ೫ ॥
ಲೀಲೆಯಿಂ ವಾರ್ಧಕದ ಷಟ್ಪದಿಯ ಮೊದಲ ಪದ।
ದೋಳಿಗೆಯು ಮಿರ್ಪತ್ತು ಮಾತ್ರೆಯಿಂದೆಸೆದಿರ್ಕು।
ಮಾಲಲಿತ ಮೆನಿಪ ಮೂಱಾಱನೆಯ ಪಾದಗಳ್ ಮೂವತ್ತೆರಡು ಮಾತ್ರೆಯಿಂ॥
ಮೇಲೆನೆ ವಿರಾಜಿಸುಗುಮಿಂತಾಱು ಪಾದಂಗ।
ಳಾಲಿಸಲ್ ಮಾತ್ರೆಗಳ್ ನೂಱನಲ್ವತ್ತಱಿಂ।
ಮೇಲೆ ನಾಲ್ಕೆಸೆದಪುವು ಛಂದೋಂಬುರಾಶಿಯೊಳ್ ನೀಂ ಕೇಳ್ವುದಿಂದುವದನೇ ॥ ೬ ॥

‡ ಭಗವದ್ಭವಾನೀವಲ್ಲಭ ಪಾದಾರವಿಂದ ದ್ವಂದ್ವ ಮಕರಂದ ಮತ್ತ ಮಧುಕರಾಯಮಾಣ ಸುಕವಿ ಜನ ಸಂಸ್ತೂಯಮಾನ. .... ನಾಗವರ್ಮ ವಿರಚಿತಮಪ್ಪ......... ಪಂಚಮಂ ಕರ್ಣಾಟ ವಿಷಯಜಾತಿವೃತ್ತ ಪ್ರಕರಣಂ (ಪಾ),

ಇದು ಪರಮೇಶ್ವರ ಚಾರುಚರಣಾರವಿಂದ ದ್ವಂದ್ವ ಮಕರಂದಮತ್ತ ಮಧುಕರಾಯಮಾಣ ವಿಬುಧ ... ..ರಾಜಹಂಸ ವಿರಚಿತ......ಕರ್ಣಾಟ ವಿಷಯಜಾತಿವೃತ್ತಾಧಿಕಾರಂ ಸಮಾಪ್ತಂ,

ಇದು ಸಮಸ್ತಸುರಾಸುರೇಂದ್ರ ಮುನೀಂದ್ರ ಮಣಿಮಕುಟ ಘಟಿತ ಶ್ರೀಮದ್ಭಗವದರ್ಹತ್ಪರಮೇಶ್ವರ ಪಾದಾರವಿಂದ ದ್ವಂದ್ವ... .ನಾಗವರ್ಮ ವಿರಚಿತಮಪ್ಪ ಛಂದೋಂಬುರಾಶಿಯೊಳ್ ನೆಗಟ್ಟ ಕರ್ಣಾಟಕ ವಿಷಯಜಾತಿವೃತ್ತಾಧಿಕಾರಂ ಪಂಚಮಾಶ್ವಾಸಂ.

# ಷಷ್ಠಾಧಿಕಾರಂ

---

## ಷಟ್ಪ್ರತ್ಯಯ ವಿವರಣ ಪ್ರಕರಣಂ

*ಕಂ|| ಜಯ[1]ದೇವಾದ್ಯರ ಛಂದೋ|
ನ್ವಯ ಪ್ರಯೋಗತರ ಮಾದುವಂ ಪೇಟ್ದಿಂ [2]ನಿ||
ರ್ಣಯಮಾಗಿರಲಿಂ ಷಟ್ಪ್ರ|
ತ್ಯಯಮಂ [3]ಚೆಲ್ವಾಗೆ ಪೇೞ್ವೆ ನಂಬುಜವದನೇ ||೧||‡

(ಮೊದಲ ಪ್ರತ್ಯಯಂ)

ವ|| ಪ್ರಸ್ತಾರ ಮಿಂತಕ್ಕುಂ—

§ಕಂ|| ಗುರುಗಳ ನಿಟ್ಟವಱಾದಿಯ|
ಗುರುವಿಂದಂ ಕೆಳಗೆ ಲ[4]ಘುವನಿಡು ಮುಂತೆ ಸಮಂ||
[5]ಗುರು ಪೂರಣೆ ಪಿಂತೆ [6]ನಿರಂ|
ತರ ಲಘುಗಳನೆಯ್ದುವನ್ನೆಗಂ ಮೃಗನಯನೇ ||೨||

---

(1) ದೇವಾಕ್ಷರಥವಳ ಪ್ರಯೋಗ (ಪಾ) ದೇವಾಕ್ಷರದ ಸಿಳಿದಯ।......ರಮಾದುವೆಲ್ಲಮಂ (ಪಾ) ದೇವಾದ್ಯಛ್ಛಂದೋ (ಪಾ) ದೇವಾಕ್ಷರದ ಸಿಳಿ। ದಯಕಾರಣ ಪ್ರಯೋಗತರ (ಪಾ) ಬಯಸಿದ ದೇವಾಕ್ಷರದ। ಪ್ರಯೋಗತರ ಮಾದುವೆಲ್ಲಮಂ, (2) ನಿರ್ಣಯಮಾಗಿಲ್ಲಿಂ (ಪಾ) ನಿರ್ಣಯಮಾದುದ ಕೇಳ್ (ಪಾ), (3) ಚೆನ್ನಾಗಿ ಭಾವಿಸಂಬುಜ, (4) ಘುವಂಬರೆ, (5) ಗುರುಪೂರೆಣೆ ಪಿಂತೆ ಸಮಂಬರೆ, (6) ನಿರಂತರ ಲಘು.

* ಈ ಅಧಿಕಾರದ ಆದಿಯಲ್ಲಿ ಶ್ರೀಕಾರವಿರುವಕಂದವಿಲ್ಲ (ಹಸ್ತಲಿಖಿತ ಪ್ರತಿಗಳಲ್ಲಿ ಕೈಬಿಟ್ಟು ಹೋಗಿರಬಹುದು).

ಮ|| ರಾ|| ಕಿಟ್ಟೆಲ್ ಸಾಹೇಬರು "ಬಯಸಿದ ದೇವಾಕ್ಷರದ ಪ್ರಯೋಗ" ಎಂಬ ಪಾಠವನ್ನಿಟ್ಟುಕೊಂಡು ಅದಕ್ಕೆ ಸಂಬಂಧವಲ್ಲದ ಅರ್ಥವನ್ನು ಕಲ್ಪಿಸಿರುವರು. "Nagavarma knows only one kind of true Canarese Metres: The Devakshara feet metres" ಎಂದು ಬರೆದಿರುವರು. —K. I. P. XVI.

‡ ಪ್ರಸ್ತಾರೋ ನಷ್ಟ ಉದ್ದಿಷ್ಟ ಏಕದ್ವ್ಯಾದಿಲಗಕ್ರಿಯಾ।
ಸಂಖ್ಯಾನಮಧ್ವಯೋಗಶ್ಚ ಷಡೇತೇ ಪ್ರತ್ಯಯಾಃ ಸ್ಮೃತಾಃ ॥

ಎಂಬ ಈ ಸಂಸ್ಕೃತಶ್ಲೋಕವು (ಪ್ರತ್ಯಯಗಳ ಹೆಸರುಳ್ಳುದು) ಕೆಲವು ಪ್ರತಿಗಳಲ್ಲಿವೆ.

§ ಈ ಪ್ರಸ್ತಾರದ ವಿವರಣವು ಸಂಜ್ಞಾ ಪ್ರಕರಣದ (೩೮-೪೦) ಪದ್ಯಗಳಲ್ಲಿ ಹೇಳಿದೆ (ಎಂಟು ಅಕ್ಷರ ಗಣಗಳ ಗುರುಲಘು ಸ್ವರೂಪವನ್ನು ತಿಳಿಸುವುದಕ್ಕೂ, ಮೂರು ಅಕ್ಷರಕ್ಕೆ ಒಂದು ಗಣವಾದುದರಿಂದ ಗಣಗಳು ಎಂಟೇ ಎಂದು ನಿರ್ಧಾರವಾಗಿ ತಿಳಿಸುವುದಕ್ಕೂ ಪ್ರಸ್ತಾರಸ್ವರೂಪವನ್ನು ಅಲ್ಲಿ ಹೇಳಿದೆ).

ಮೂಱನೆಯ ಮತ್ತು ನಾಲ್ಕನೆಯ ಗಣಗಳ ಪ್ರಸ್ತಾರ ಕ್ರಮ—

I ೨ನೆಯ ಛಂದಸ್ಸು—

1. U¹ U
2. — U²
3. U³ —
4. — —

II ೩ನೆಯ ಛಂದಸ್ಸು—

1. U¹ U U
2. — U² U
3. U³ — U
4. — — U⁴
5. U⁵ U —
6. — U⁶ —
7. U⁷ — —
8. — — —

III ೪ನೆಯ ಛಂದಸ್ಸು—

1. U¹ U U U
2. — U² U U
3. U³ — U U
4. — — U⁴ U
5. U⁵ U — U
6. — U⁶ — U
7. U⁷ — — U
8. — — — U⁸
9 U⁹ Ū U —
10. — U¹⁰ U —
11. U¹¹ U U —
12. — — U¹² U
13. U¹³ U — —
14. — U¹⁴ — U
15. U¹⁵ — — U
16. — — — —

ಇದರ ವಿವರಣಂ—

I ಮೊದಲ ನಾಲಿನಲ್ಲಿ ಆ ಛಂದಸ್ಸಿನ ಅಕ್ಷರಗಳಷ್ಟು (ಇದು ಎರಡನೆಯ ಛಂದಸ್ಸಾದುದರಿಂದ ೨) ಗುರುಗಳು. ಇವುಗಳಲ್ಲಿ ಮೊದಲನೆಯದು ( U¹) ಆದಿಗುರು, ಅದರ ಕೆಳಗೆ ಎರಡನೆಯ ಸಾಲಿನ ಆದಿಯಲ್ಲಿ ಲಘುವನ್ನು ಬರೆವುದು (ಮುಂತೆ ಸಮಂ) ಆದುದರಿಂದ ಮೇಲಿನಂತೆ ಆ ಸಾಲಿನಲ್ಲಿ ಎರಡನೆಯದು ಗುರು, ಇನ್ನು ಮೂರನೆಯ ಸಾಲಿನಲ್ಲಿ, ಎರಡನೆಯ ನಾಲಿನಲ್ಲಿರುವುದು U² ಆ ಸಾಲಿನ ಆದಿಗುರು (ಏಕೆಂದರೆ ಅದರ ಹಿಂದೆ ಇರುವುದು ಲಘು)ವಿನ ಕೆಳಗೆ ಲಘು. (ಪಿಂತೆಗುರು) ಆದರ ಹಿಂದೆ ಗುರುವನ್ನೇ( U³) ಇಡುವುದು. ಈಗ ನಾಲ್ಕನೆಯ ಸಾಲಿನಲ್ಲಿ ಮೂರನೆಯ ಸಾಲಿನ ( U³) ಆದಿಗುರುವಿನ ಕೆಳಗೆ ಲಘು (ಮುಂತೆ ಸಮಂ) ಮುಂದೆ ಮೇಲಣ ಸಾಲಿನಲ್ಲಿ ಇರುವ ಲಘುವನ್ನೇ ಬರೆಯಬೇಕು. ಈ ನಾಲಿನಲ್ಲಿ ಎರಡೂ ಲಘುಗಳಾದುವು ಈಗ ನಾಲ್ಕನೆಯ ಸಾಲು ಸರ್ವ ಲಘುವಾದುದರಿಂದ ಮುಂದೆ ಪ್ರಸ್ತಾರವಿಲ್ಲ. ಹೀಗೆಯೆ II ಮತ್ತು IIIನೆಯ, (೩ ಮತ್ತು ೪ನೆಯ ಛಂದಸ್ಸಿನ) ಪ್ರಸ್ತಾರಗಳನ್ನು ನೋಡಿಕೊಳ್ಳುವುದು.

(ಎರಡನೆಯ ಪ್ರತ್ಯಯಂ)

ವ॥ ನಷ್ಟಮಿಂತಕ್ಕುಂ—

[1]ಮೊದಲೊಳೆ ಛಂದದೀಯೆಡೆಯೆ ಲೆಕ್ಕದೆ ಕೆಟ್ಟುದು ವೃತ್ತಮೆಂದು ಪೇ।
ಳ್ವುದು ಬಗೆವಂದೊಡಾಗಳ[2]ವಱಂಕಮನರ್ಧಿಸಿ ಬೆಳ್ಪನಿಟ್ಟು ಕೊ॥
ಳ್ವುದು ಸಮಭಾಗಮಿಾಯದೊಡೆ ರೂಪಯುತಾರ್ಧದೆ ಬಿಣ್ಪನಿಟ್ಟು[3]ಕೊ।
ಳ್ವುದು ಗಡ ಸೂತ್ರಮಿಾತೆಱದೆ ಕಾಣ್ಬುದು ನಷ್ಟಮನಂಬುಜಾನನೇ ॥೩॥

ಉದಾಹರಣಂ—

೪ನೆಯ ಛಂದದ ೧೦ನೆಯ ವೃತ್ತವು ಕೆಟ್ಟಿದೆ, ಅದರ ಗುರು ಲಘು ಸ್ವರೂಪವೇನು? ಎಂಬುದು ಪ್ರಶ್ನೆ - ಇದಕ್ಕೆ ನಷ್ಟವೆಂದು ಹೆಸರು.

ಉತ್ತರ— ಇಲ್ಲಿ ಛಂದಸ್ಸು ಎಷ್ಟನೆಯದೋ ಅಷ್ಟು ಗುರುಲಘ್ವಕ್ಷರ ಗಳಿರಬೇಕೆಂದು ತಿಳಿಯಬೇಕು. ೪ನೆಯ ಛಂದಸ್ಸಾಗಿರುವುದರಿಂದ ಈ ವೃತ್ತಪಾದದಲ್ಲಿ ನಾಲ್ಕು ಗುರು ಲಘ್ವಕ್ಷರಗಳಿರಬೇಕು, ಮೊದಲು ಛಂದಸ್ಸೆಷ್ಟನೆಯದೋ ಆ ಸಂಖ್ಯೆಯನ್ನು ಅರ್ಧಿಸುವುದು, ಇಲ್ಲಿ ೧೦ನೆಯ ಛಂದಸ್ಸಾದುದರಿಂದ (೧೦÷೨=೫) ಇಲ್ಲಿ ೧೦ ಎಂಬುದು ಸಮನಾಗಿ ಭಾಗವಾದುದರಿಂದ ಆ ವೃತ್ತದ ಮೊದಲಕ್ಷರವು ಲಘುವಾಗಿರಬೇಕು, ಆದುದರಿಂದ (–) ಲಘುವನ್ನು ಹಾಕಬೇಕು, ಬಳಿಕ ಲಬ್ಧವು ೫ ಇದು ಸಮನಾಗಿ ಭಾಗವಾಗುವುದಿಲ್ಲ, ೧ನ್ನು ಸೇರಿಸಿ ಅರ್ಧಿಸುವುದು (೫+೧=೬÷೨=೩ ಈಗ ಆ ಲಘುವಿನ ಪಕ್ಕದಲ್ಲಿ ಗುರುವನ್ನು ಇಡುವುದು(– U) ಈಗ ಲಬ್ಧ ೩ ಆದೂ ಸಮನಾಗಿ ಭಾಗವಾಗುವುದಿಲ್ಲ, ಆದುದರಿಂದ ೧ನ್ನು ಅದಕ್ಕೆ ಕೂಡಿಸುವುದು (೩+೧=೪÷೨=೨) ಬಳಿಕ ಅರ್ಧಿಸಿ ಗುರುವನ್ನು ಹಿಂದಣ ಲಘು ಗುರುಗಳ ಪಕ್ಕದಲ್ಲಿಡುವುದು (– U U) ಈಗ ಲಬ್ಧ ೨ ಇದು ೨ ರಿಂದ ಸಮನಾಗಿ ಭಾಗವಾಗುವುದು (೨÷೨=೧) ಆದುದರಿಂದ ಹಿಂದಣ ಮೂರಕ್ಷರಗಳ ಪಕ್ಕದಲ್ಲಿ ಲಘುವನ್ನಿಡುವುದು (– U U –). ಇಲ್ಲಿ ನಾಲ್ಕನೆಯ ಛಂದಸ್ಸಿನ ಪಾದವು ನಾಲ್ಕಕ್ಷರವಾದುದರಿಂದಲೂ, ಇಲ್ಲಿ ನಾಲ್ಕಕ್ಷರಗಳು ಬಂದಿರುವುದರಿಂದಲೂ ಮುಂದೆ ಕಾರ್ಯವಿಲ್ಲ. ಈಗ ನಾಲ್ಕನೆಯ ಛಂದಸ್ಸಿನ ೧೦ನೆಯ ವೃತ್ತದ ಗುರು ಲಘ್ವಕ್ಷರಗಳು ಈ ಬಗೆಯಲ್ಲಿರುವುವು (– U U –).

[ಇದನ್ನು ಪ್ರಸ್ತಾರದಿಂದ ಸರಿನೋಡಬಹುದು —(೧) U U U U (೨) – U U U (೩) U – U U (೪) – – U U (೫) U U – U (೬) – U – U (೭) U – – U (೮) – – – U (೯) U U U – (೧೦) – U U –]

---

(1) ಪುದಿಯದಿ ಛಂದಮಿಾಯದಿದೆ ಲೆಕ್ಕವೆಕೆಟ್ಟುದೆನಿಪ್ಪಲೆಕ್ಕಮುಂ। ತದು......... ನೊಪಿಸಿಟ್ಟು......... ಕಾಣ್ಬದೆ..... ... (ಪಾ) ಮೊದಲೊಳೆ ಛಂದಮಿಾಯೆಡೆ (ಪಾ) ಛಂದದೀಯಡಿಯ, (2) ವರಂತಮ (ಪಾ), (3) ಕೊಳ್ಗಿದು ಗಡ (ಪಾ).

(ತೃತೀಯ ಪ್ರತ್ಯಯಂ)

ವ|| ಉದ್ದಿಷ್ಟಮಿಂತಕ್ಕುಂ—

ಮ|| ಬಗೆದಾವೃತ್ತಪದಾಂತಮೆಯ್ದು ವಿನೆಗಂ [1]ಸಂಖ್ಯಾಂಕಮಂ ಸೂಕ್ತದಿಂ |
ದ್ವಿಗುಣಂಗೆಯ್ದು ಲಘುವ್ರಜಂಗಳೆಡೆಯೊಳ್ ನಿಂದಂಕಮಂ ಕೂಡಿ ಮೆ||
ಲ್ಲಗೆ ಮತ್ತೊಂದನೆ [2]ಕೂಡು ಬಿಣ್ಪಿನೆಡೆಯೊಳ್ ನಿಂದಂಕಮಂ ಕೂಡದಿರ್ |
ನೆಗಳ್ದುದ್ದಿಷ್ಟವಿಧಾನ ಮಿಾ[3]ತೆಱನಿದಂ ನೀಂ ಕಲ್ವುದಬ್ಜಾನನೇ　　|| ೩ ||

ಇದಱ ಕ್ರಮವಿವರಣಂ— ೧೧ನೆಯ ಛಂದಸ್ಸಿನಲ್ಲಿ ಕೆಳಗೆ ಕೊಟ್ಟಿರುವ ವೃತ್ತಪಾದವು ಪ್ರಸ್ತಾರ ಕ್ರಮದಲ್ಲಿ ಎಷ್ಟನೆಯದು? ಇದುಕ್ಕೆಪ್ರಶ್ನೆ—

| 1 | 2 | 4 | 8 | 16 | 32 | 64 | 128 | 256 | 512 | 1024 |
|---|---|---|---|---|---|---|---|---|---|---|
| U | U | U | U | U | – | U | U | – | U | U |
| ಭೂ | ವಿ | ವ್ಯೋ | ಮ | ದ್ವಂ | ದ್ವ | ರು | ದ್ರ | ದ್ವ | ಯಂ | ಗಳ್ |

ಉತ್ತರ.—

**ತಿಳಿಯಬೇಕಾದ** ವೃತ್ತಪಾದದ ಕೊನೆಯವರೆಗೂ (ಬಗೆದಾವೃತ್ತ ಪದಾಂತಮೆಯ್ದು ವಿನೆಗಂ)ಇರುವ ಗುರು ಲಘುಗಳ ಮೇಲೆ ೧-೨, ಮೊದಲಾದ ಅಂಕೆಗಳನ್ನು (ಸಂಖ್ಯಾಂಕಮಂ ಸೂಕ್ತದಿಂ ದ್ವಿಗುಣಂಗೆಯ್ದು) ಸೂಕ್ತವಾಗಿ ಎರಡೆರಡರಷ್ಟು ಮಾಡಿಹಾಕುವುದು, ಬಳಿಕ ಎಲ್ಲಾ ಲಘ್ವಕ್ಷರಗಳ ಮೇಲಿರುವ ಅಂಕಗಳನ್ನೂ ಕೂಡುವುದು, ಬಳಿಕ (ಲಘುವ್ರಜಂಗಳೆಡೆಯೊಳ್ ನಿಂದಂಕಮಂ ಕೂಡಿ) ಮೆಲ್ಲಗೆ ಆ ಸಂಖ್ಯೆಗೆ ಮತ್ತೊಂದನ್ನು ಕೂಡುವುದು, ಇದೇ ಆ ವೃತ್ತದ ಪ್ರಸ್ತಾರ ಕ್ರಮದಲ್ಲಿ ಬರುವ ಸಂಖ್ಯೆಯು, ಆದರೆ (ಬಿಣ್ಪಿನೆಡೆಯೊಳ್ ನಿಂದಂಕಮಂ ಕೂಡದಿರ್) ಗುರುವಿನ ಮೇಲಿರುವ ಅಂಕೆಗಳನ್ನು ಕೂಡಕೂಡದು, ಇದೇ ಉದ್ದಿಷ್ಟವು – ಪ್ರಕೃತೋದಾಹರಣದಲ್ಲಿ ಲಘುವಿನ ಮೇಲಿರುವ ಸಂಖ್ಯೆಗಳು ೩೨+೨೫೬=೨೮೮ (ಲಘುವಿನ ಮೇಲಿರುವ ಅಂಕೆಗಳು+ಮತ್ತೊಂದು) ೨೮೮+೧=೨೮೯ನೆಯ ವೃತ್ತವಿದು.*

---

(1) ಸಂಖ್ಯಾತಮಂ ಸೂಕ್ಷ್ಮದಿಂ (ಪಾ) ಸಂಖ್ಯಾತಮಂ ಸೂತ್ರದಿಂ (ಪಾ), (2) ಕೂಡಿ...... ದಂಕಮಂ ಬಿಟ್ಟುಕೇಳ್ (ಪಾ), (3) ತೆಱನುಮಕ್ಕುಂ ಪದ್ಮಪತ್ರೇಕ್ಷಣೇ (ಪಾ),

| * U | U | U | U | U | – | U | U | – | U | U |
|---|---|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 | 10 | 11 |

ಇದನ್ನು ನಷ್ಟ ಸೂತ್ರದಿಂದ ಸರಿನೋಡುವುದು, ಈ ವೃತ್ತದ ಸಂಖ್ಯೆ ೨೮೯, ಇದು ಸರಿಯಾಗಿ ಅರ್ಧವಾಗುವುದಿಲ್ಲ, ಆದುದರಿಂದ ೧ನ್ನು ಸೇರಿಸಿ ಭಾಗಿಸುವುದು ೨೮೯+೧=೨೯೦÷೨=೧೪೫, ಈಗ ಇದಕ್ಕಾಗಿ ಒಂದು (1) ಗುರುವನ್ನಿಡುವುದು. ಲಬ್ಧವು ೧೪೫ ಇದೂ ಸರಿಯಾಗಿ ಭಾಗವಾಗುವುದಿಲ್ಲ.

(ಚತುರ್ಥ ಪ್ರತ್ಯಯಂ)

1ವ|| ಎಕದ್ವ್ಯಾದಿ ಲಗಕ್ರಿಯೆ ಯಿಂತಕ್ಕುಂ—

ಚ||2ಅನುಗತವೊಂದಱಂಕಮನೆ ಛಂದದ ಲೆಕ್ಕದೊಳ3ಳೂರ್ಧ್ವವಿಟ್ಟು ಮೆ |
ಲ್ಲನೆ ಬೞಿಕೊಂದ4ನಿಟ್ಟದನೆ ಕೂಡುವುದೊಂದಱೊಳೊಂದನಿಟ್ಟು ಮು ||
ನ್ನಿನ ತೆಱನಂತದಂ5ತಳೆವುದಪ್ಪುದು 6ತತ್ಕ್ರಮವೆಯ್ದುವನ್ನೆಗಂ |
ವನಜದಳಾಕ್ಷಿ ನೀನಱಿವು7 ದೇಕಯುಗತ್ರಿಲಗ ಕ್ರಮಂಗಳಂ || ೪ ||*

(1) ಏಕ ದ್ವಿತ್ರಿಲಗಕ್ರಮ ಘಿಂತಕ್ಕುಂ, (2) ಅನುಮತ, (3) ಳಂಕವಿಟ್ಟು, (4) ನಿಟ್ಟಡರೆ (ಪಾ) ನಿಟ್ಟುಬರೆ, (5) ತಳರದಿರ್ಪುದು (ಪಾ) ತಳೆದದಿರ್ಪುದು, (6) ತಂತ್ರಮು, (7) ದೇಕಯುಗಾದಿ ಲತ್ರಯಂಗಳಂ.

* ನಷ್ಟ ಪ್ರತ್ಯಯವನ್ನು ವಿವರಿಸುವ ಈ ಎರಡು ಪದ್ಯಗಳು ಕೆಲವು ಪ್ರತಿಗಳಲ್ಲಿ ಈ ಪದ್ಯದ ಹಿಂದೆ ಇವೆ—

ಚಂ॥ ಇನಿತರಛಂದ (ದೀ) ಮಾಸನೆಯ ವೃತ್ತಮಿದೆಂತುಟ(ದೆ)ಂಬ ಲೆಕ್ಕಮಂ ।
ತನಿತೆಯದರ್ಧಿಸಲ್ಕೆ ಲಘು ತದ್ವಿಷಮಕ್ಕಿರದೊಂದನೊಂದಿಸಿ ||
ರ್ದನಿತೆಯೆ ಬಿಣ್ಪವಂ ಗುರುವಿನೊಳ್ತರದೆತ್ತೆ (ಸಮಂತದು) ನಷ್ಟಮಾ ।
ಯ್ತೆನಿಸಿದ ವೃತ್ತಮಾತೆಱವೆ ಬರ್ಪುದು ತಪ್ಪದಿದಂಬುಜಾನನೇ ॥
ಪುದಿಯದೆ ಛಂದ ಮಾಯೆಡೆಯೊ(ಳಿರ್ಪುದು) ಕೆಟ್ಟುದಿದೆಂಬ ವೃತ್ತಮಂ ।
ಪದೆ ಬಗೆ ಬಂದೊಡಾಗಳವಱಕ್ಕರಮಂತವನರ್ಧಿಸಿಟ್ಟು ಸಂ ।
ಮುದದೊಳೆ ಸೇರಿಸಾ ಗಣದ ಲೆಕ್ಕದೊಳಾಗಳೆ ಯೊಪ್ಪವಿಟ್ಟು ಮಾ ।
ಱ್ಪುದು ಗಣಸೂತ್ರಮಾ(ನೀ)ತೆಱವೆ ಬರ್ಪುದು ತಪ್ಪದಿದೆಂಬುಜಾನನೇ ॥

*ಈ ಪದ್ಯಗಳಾದ ಬೞಿಕ ಈ ಕಂದವು ಎರಡು ಪ್ರತಿಗಳಲ್ಲಿವೆ—

ಮಿಳಿತಂ ಛಂದೋಕ್ಷರ ಸಮ । ದಳ ವಿಷಯ ಖರೂಪಮಾಗಿ ತದ್ದ್ವಿಗುಣಂ ಕೆ ॥
ಯ್ಕೊಳೆ ರೂಪದಲ್ಲಿ ಸೊನ್ನೆಗ । ಳೊಳೆವ್ವರ್ಗಂ ವೃತ್ತಸಂಖ್ಯೆ ಪುಟ್ಟುಗುಮಿಂತುಂ ॥

೧೪೫+೧=೧೪೬=೭೩ ಈಗಲೂ (2)ಗುರು, ೭೩+೧=೭೪÷೨=೩೭ ಈಗಲೂ (3)ಒಂದು ಗುರು, ೩೭+೧=೩೮÷೨=೧೯ ಈಗಲೂ (4)ಗುರು, ೧೯+೧=೨೦—೨=೧೦ ಈಗಲೂ ಒಂದು (5)ಗುರು, ೧೦—೨=೫ ಈಗ (6)ಲಘು (ಸರಿಯಾಗಿ ಭಾಗವಾಗಿದೆ) ೫+೧=೬÷೨=೩ ಈಗ ಒಂದು (7)ಗುರು ೩+೧=೪÷೨=೨ ಈಗ ಒಂದು (8)ಗುರು, ೨÷೨=೧ ಈಗ ಒಂದು ೯ ಲಘು (ಸಮನಾಗಿ ಭಾಗವಾಗಿದೆ.) ೧ ಲಬ್ಧವಾದ್ದುದರಿಂದ ಮುಂದೆಲ್ಲವೂ ಗುರುಗಳೇ ಇಲ್ಲಿಯ ವರೆಗೆ (9) ಅಕ್ಷರಗಳಾಗಿವೆ, ಹನ್ನೊಂದನೆಯ ಛಂದಸ್ಸಿನ ವೃತ್ತಪಾದವಾದ ಇದಕ್ಕೆ ಇನ್ನೂ ಎರಡಕ್ಷರಗಳು ಬೇಕು - ಅವೆರಡೂ ಗುರುಗಳೇ, ಈಗ ಮೇಲೆ ಕೇಳಿರುವ ಉದ್ದಿಷ್ಟದಲ್ಲಿರುವ ಗುರು ಲಘುಗಳಕ್ರಮವೇ ಇಲ್ಲಿಯೂ ಬಂದಿರುವುದರಿಂದ ಈ ಉದ್ದಿಷ್ಟವು ಸರಿಯಾಗಿರುವುದು.

ಈ ಪ್ರತ್ಯಯವು ಯಾವುದಾದರೊಂದು ಛಂದಸ್ಸಿನಲ್ಲಿ ಒಂದು ಲಘುವಿರುವ ವೃತ್ತವೆಷ್ಟು ? ಎರಡು ಲಘುವಿರುವ ವೃತ್ತವೆಷ್ಟು? ಎಂಬ ಒಂದು ಎರಡು ಮೊದಲಾದ ಲಘುಗಳಿರುವ ವೃತ್ತಗಳ ಲೆಕ್ಕವನ್ನು ತಿಳಿಸುತ್ತದೆ, ೧ನೆಯ ಚಿತ್ರವು ೨ನೆಯ ಛಂದಸ್ಸಿನ ಏಕಾದಿ ಲಘುಗಳನ್ನೂ, ೨ನೆಯದು ಮೂರನೆಯಛಂದಸ್ಸಿನ ಏಕಾದಿ ಲಘುಗಳನ್ನೂ, ೩ನೆಯದು ನಾಲ್ಕನೆಯ ಛಂದಸ್ಸಿನ ಏಕಾದಿ ಲಘುಗಳನ್ನೂ ತಿಳಿಸುವುದು :

— ಅತ್ಯುಕ್ತಾ ಛಂದಸ್ಸು ೨ನೆಯದು —




— ಮಧ್ಯಾ ಛಂದಸ್ಸು ೩ನೆಯದು —




— ಪ್ರತಿಷ್ಠಾ ಛಂದಸ್ಸು ೪ನೆಯದು — (೩)



[ಈ ಪ್ರತ್ಯಯವನ್ನು ರಚಿಸುವ ಕ್ರಮಂ—

ಯಾವ ಛಂದಸ್ಸಿನಲ್ಲಿ ಒಂದು ಎರಡು ಮೊದಲಾದ ಲಘುಗಳಿರುವ ವೃತ್ತಗಳೆಷ್ಟಿರುವೆಂಬುದು ತಿಳಿಯಬೇಕೋ ಆ ಛಂದಸ್ಸಿನ ಅಕ್ಷರಗಳ ಸಂಖ್ಯೆಗಿಂತ ಒಂದು ಸಂಖ್ಯೆ ಹೆಚ್ಚಾಗಿರುವಂತೆ ಮನೆಗಳನ್ನು ಮಾಡಿಕೊಳ್ಳಬೇಕು, ಮತ್ತೆ ಮುಂದೆಮುಂದೆ ಮೇಲಿಂದ ಒಂದೊಂದು ಮನೆಯನ್ನು ಕಡಿಮೆಮಾಡಿಕೊಳ್ಳಬೇಕು, ಮೊದಲಿನ (ಮೇಲಿಂದ ಕೆಳಕ್ಕೆ) ಸಾಲಿನಲ್ಲಿ ಬರಿಯ ೧ ಎಂಬ ಸಂಖ್ಯೆಯನ್ನೇ ಹಾಕಬೇಕು, ಹಾಗೆಯೇ ಕೆಳಗಣ ಸಾಲಿನಲ್ಲೂ ೧ ಎಂಬ ಸಂಖ್ಯೆಯನ್ನೇ ಹಾಕಬೇಕು, ಬಳಿಕ I. ಎರಡನೆ ಸಾಲಿನಲ್ಲಿರುವ ೧ನ್ನು ಅದರ ಪಕ್ಕದ ಸಾಲಿನ ಮೇಲ್ಗಡೆ ಒಂದರೊಡನೆ ಕೂಡಿ ಆದರ ಮೇಲಣ ಸಾಲಿನಲ್ಲಿ (ಎರಡನೆಯ ಕಡೆ)ಹಾಕಬೇಕು, II. ಹಾಗೆಯೇ ಕೂಡಿದ ಅಂಕೆಯನ್ನು ಆದರ ಪಕ್ಕದ ಸಾಲಿನ ಮೇಲ್ಗಡೆಯಿರುವ ಅಂಕೆಯೊಡನೆ ಸೇರಿಸಿ ಆದರ ಮೇಲ್ಗಡೆಯಲ್ಲಿ ಹಾಕಬೇಕು, ಹೀಗೆಯೇ ಮುಂದೆ ಮುಂದೆ ಛಂದಸ್ಸಿಗನುಗುಣವಾಗಿ ಹೆಚ್ಚಿದ ಮನೆಗಳನ್ನು ಸೇರಿಸಿ ಹಾಕಬೇಕು, ಕೊನೆಯ ಸಾಲಿನ ಅಂಕೆಗಳೆಲ್ಲವನ್ನೂ ತೆಗೆದುಕೊಂಡರೆ ಆ ಛಂದಸ್ಸಿನ ಏಕದ್ವ್ಯಾದಿ ಲಗಗಳು (ಲಗ=ಲಘು+ಗುರು) ತಿಳಿಯುವುವು.

ಇಲ್ಲಿ ಮೂರು ಛಂದಸ್ಸುಗಳ ಏಕದ್ವ್ಯಾದಿಲಗ ಕ್ರಿಯೆಯನ್ನು ಮಾಡಿ ತೋರಿಸಿದೆ—

ಮೊದಲ ಮೂರು ಚಿತ್ರಗಳು—೨ನೆಯ ಛಂದಸ್ಸಿಗೆ (ಅತ್ಯುಕ್ತಾ) ಸೇರಿದುವು, ಇದರಲ್ಲಿ ವೃತ್ತಸಂಖ್ಯೆಯು ೨ (ಎರಡಕ್ಷರದ ವೃತ್ತ) ಆದುದರಿಂದ ಮೊದಲನೆಯ ಸಾಲಿನಲ್ಲಿ ಮೂರು ಮನೆಗಳನ್ನು (ಮೇಲಿಂದ ಕೆಳಗೆ) ಬರೆದಿದೆ, ಎರಡನೆಯ ಸಾಲಿನಲ್ಲಿ ಮೇಲಿನಿಂದ ಒಂದು ಮನೆ ಕಡಿಮೆಮಾಡಿದೆ, (ಎರಡು ಮನೆಯಿದೆ) ಮೂರನೆಯದರಲ್ಲಿ ಮೇಲಿನಿಂದು ಒಂದು ಕಡಿಮೆಮಾಡಿ ಒಂದು ಮನೆ ಮಾಡಿದೆ, (I ನ್ನು ನೋಡಿ) ಮತ್ತೆ ಕೆಳಗಣ ಸಾಲಿನಲ್ಲಿ ಎರಡನೆಯ ಮನೆಯಲ್ಲಿರುವ ಒಂದನ್ನು ಮೊದಲಿನ ಸಾಲಿನ ಎರಡನೆಯ ಮನೆಯಲ್ಲಿರುವ (ಕೆಳಗಿನಿಂದ) ೧ರೊಡನೆಕೂಡಿ ಬಂದ ೨ನ್ನು ಎರಡನೆಯ ಸಾಲಿನ ಎರಡನೆಯ (ಕೆಳಗಿನಿಂದ) ಮನೆಯಲ್ಲಿ ಬರೆದಿದೆ, (II) ಈಗ ಕೊನೆಯ ಸಾಲಿನಲ್ಲಿರುವ ಅಂಕೆಗಳು ೧ . ೨ . ೧ ಈ ಸಂಖ್ಯೆಗಳು ಈ ಛಂದಸ್ಸಿನಲ್ಲಿ ಸರ್ವಲಘುವಾದ ವೃತ್ತವೊಂದು, ೧ ಒಂದು ಲಘುವಿರುವ ವೃತ್ತಗಳೆರಡು ೨ ಸರ್ವಗುರುವಾದ ವೃತ್ತವೊಂದು ಎಂದು ತಿಳಿಸುವುದು.

ಎರಡನೆಯ ಮೂರು ಚಿತ್ರಗಳು—ಮೂರನೆಯ (ಮಧ್ಯಾ) ಛಂದಸ್ಸಿನ ಅಕ್ಷರಗಳು ಮೂರಾದುದರಿಂದ ಒಂದು ಹೆಚ್ಚಾಗಿ ಎಂದರೆ ೪ ಮನೆಗಳನ್ನು ಮೊದಲನೆಯ ಸಾಲಿನಲ್ಲೂ (ಒಂದೊಂದು ಕಡಿಮೆಯಾಗುವುದರಿಂದ) ೩ ಮನೆಗಳನ್ನು ೨ನೆಯ ಸಾಲಿನಲ್ಲೂ, ೨ ಮನೆಗಳನ್ನು ೩ನೆಯ ಸಾಲಿನಲ್ಲೂ, ಒಂದು ಮನೆಯನ್ನು ನಾಲ್ಕನೆಯ ಸಾಲಿನಲ್ಲೂ ಮಾಡಿದೆ, (I) ಈಗ ಕೆಳಗಣ ೨ನೆ ಮನೆಯ ಸಾಲಿನ ಒಂದನ್ನು ಮೊದಲನೆಯ ಸಾಲಿನ (ಕೆಳಗಿನಿಂದ) ೨ನೆಯ ಮನೆಯಲ್ಲಿರುವ ೧ ರೊಡನೆ ಸೇರಿಸಿ ಬಂದ ೨ನ್ನು ಎರಡನೆಯ ಸಾಲಿನ ೨ನೆಯ ಮನೆಯಲ್ಲಿ (ಕೆಳಗಿನಿಂದ) ಬರೆದಿದೆ, ಬಳಿಕ ಈ ೨ನ್ನು ಮೊದಲನೆಯ ಸಾಲಿನ ೩ನೆ ಮನೆಯಲ್ಲಿರುವ ೧ರೊಡನೆ ಸೇರಿಸಿ ಬಂದ ೩ನ್ನು ೨ರಮೇಲಣ ಮನೆಯಲ್ಲಿ ಬರೆದಿದೆ,(II) ಬಳಿಕ

ಮೂರನೆಯ ಸಾಲಿನ ಕೆಳಗಣ ೧ನ್ನು ೨ನೆಯ ಸಾಲಿನ ೨ನೆಯ ಮನೆಯಲ್ಲಿರುವ ೨ರೊಡನೆ ಸೇರಿಸಿ ಬಂದ ೩ನ್ನು ಅದರ ಮೇಲ್ಗಡೆ ಎರಡನೆ (ಕೆಳಗಿನಿಂದ) ೩ನೆಯ ಮನೆಯಲ್ಲಿ ಬರೆದಿದೆ. ಈಗ ಕೊನೆಯ ಸಾಲಿನ ಅಂಕೆಗಳು ೧ . ೩ . ೩ ೧ ಈ ಛಂದಸ್ಸಿನಲ್ಲಿ ಸರ್ವಲಘುವೃತ್ತ ೧, ಒಂದುಲಘುವೃತ್ತ ೩, ಎರಡು ಲಘುವೃತ್ತ ೩ ಸರ್ವಗುರು ೧, ಈ ಮೂರನೆಯ ವೃತ್ತವು ಗಣಗಳೆಂಟನ್ನು ತೋರಿಸುವುದರಿಂದ ಗಣಗಳಲ್ಲಿ ಸರ್ವಲಘು ನಗಣವೊಂದು, ಆದಿ - ಮಧ್ಯ ಅವಸಾನಗಳಲ್ಲಿ ಲಘುಉಳ್ಳವು ಎಂದರೆ ಒಂದೊಂದು ಲಘುವುಳ್ಳವು, ಯ. ರ. ತ. ಗಳು ೩, ಹಾಗೆಯೇ ೨ಲಘುವಿರತಕ್ಕವು ಭ.ಜ.ಸ ಗಣಗಳು ೩, ಸರ್ವಗುರು ಮಗಣವೊಂದು, ಹೀಗೆಯೇ ಕೊನೆಯ ಚಿತ್ರವು ನಾಲ್ಕನೆಯ (ಪ್ರತಿಷ್ಠಾ) ಛಂದಸ್ಸಿನ ಏಕದ್ವ್ಯಾದಿಲಗಗಳನ್ನು ತಿಳಿಸುವುದು. ಈ ಛಂದಸ್ಸಿನಲ್ಲಿ ಸರ್ವಲಘು ೧, ೧ ಲಘು ೪, ೨ ಲಘು ೬, ೩ ಲಘು ೪, ಸರ್ವಗುರು ೧.]

(ಪಂಚಮ ಪ್ರತ್ಯಯಂ)

ವ|| ಸಂಖ್ಯಾನಮಿಂತಕ್ಕುಂ[1]—

*ಚಂ|| ದೊರೆಕೊಳೆ ವೃತ್ತಸಂಖ್ಯೆಗಳ [2]ನೋಳಿಯಿನಿಟ್ಟವಱಾದಿ ಮುನ್ನಿನಂ |
ತಿರೆ ಬಟಿಕಕ್ಕರಂ[3]ಗಳೊಳವಂ ತರದರ್ಧಿಸಿ ವಹ್ನಿವಾರ್ಧಿಯಂ ||
ಶರದೊಳೆ ಕೂಡಿಕೊಂಡು [4]ಗತಿಯಂ ಕ್ರಮದಿಂದಮೆ ಸೂತ್ರದಿ[5]ಷ್ಟದೊಳ್ |
ವಿರಚಿಸು [6]ವರ್ಣವೃತ್ತ ಲಘುಮಾತ್ರೆಗಳೆಲ್ಲಮನಂಬುಜಾನನೇ || ೫ ||

---

(1) ಸಂಖ್ಯಾನಮಂ ಪೇೞ್ವೆಂ, (2) ನೋಳಿಯೊಳೊಯ್ದಿದರಾದಿ, (3) ಗಳೊಳವಂ ನಿರಿಪ ರ್ಧಿಸಿ (ಪಾ) ಳವಂ ಯಿರದರ್ಧಿಸಿ (ಪಾ) ಳುಮನಂತದೊಳರ್ಧಿಸಿ, (4) ಗತಿಯಿಂ, (5) ಷ್ಟದಿಂ, (6) ವೃತ್ತವರ್ಣ ಗತಿಮಾತ್ರೆಗ (ಪಾ).

* ಈ ಪದ್ಯವು ಶುದ್ಧವಾಗಿಲ್ಲದಿರುವುದರಿಂದ ಸಮಂಜಸವಾದ ಅರ್ಥವನ್ನು ಕೊಡುವುದಿಲ್ಲ, ಆದರೆ ಇದರ ಆಪಾತತಃ ತೋರುವರ್ಥವು - ಮಾತ್ರಾ ವೃತ್ತಗಳ ನಷ್ಟವನ್ನು ತಿಳಿಸುವಂತೆ ತೋರುವುದು, ವೃತ್ತರತ್ನಾಕರದಲ್ಲಿ ಹೇಳಿರುವ "ಸಂಖ್ಯಾನ"ದ ಲಕ್ಷಣವು ಈ ಪದ್ಯದ ಪದಾರ್ಥದಿಂದ ಬರುವುದಿಲ್ಲ, ವೃತ್ತರತ್ನಾಕರದಲ್ಲಿ ಸಂಖ್ಯಾನದ ಲಕ್ಷಣವನ್ನು ಹೀಗೆ ಹೇಳಿದೆ— ಸಂಖ್ಯಾನವೆಂಬುದು ಆಯಾ ಛಂದಸ್ಸಿನಲ್ಲಿ ಒಟ್ಟು ಎಷ್ಟು ವೃತ್ತಗಳಾಗುವುವು, ಎಂಬ ಸಂಖ್ಯೆಯಾಗಿರುವುದು, ಇದನ್ನು ಆಯಾ ವೃತ್ತಗಳ ಏಕದ್ವ್ಯಾದಿ ಲಗಕ್ರಿಯೆಗಳ ಅಂಕೆಗಳೆಲ್ಲವನ್ನೂ ಸೇರಿಸುವುದರಿಂದ ಅಥವಾ ಉದ್ದಿಷ್ಟದಲ್ಲಿರುವ ಅಂಕಗಳನ್ನೆಲ್ಲಾ ಕೂಡಿ ಅದಕ್ಕೆ ಒಂದನ್ನು ಸೇರಿಸುವುದರಿಂದ ಪಡೆಯಬಹುದು ಎಂದು ಹೇಳಿದೆ.

ಲಗಕ್ರಿಯಾಂಕಸಂದೋಹೇ ಭವೇತ್ಸಂಖ್ಯಾ ವಿಮಿಶ್ರಿತೇ ||
ಉದ್ದಿಷ್ಟಾಂಕಸಮಾಹಾರಃ ಸೈಕೋವಾ ಜನಯೇದಿಮಾಮ್ ||

ಎಂಬುದು ವೃತ್ತರತ್ನಾಕರದ ಸೂತ್ರ.

ನಾಲ್ಕನೆಯ ಛಂದಸ್ಸಿನ ಸಂಖ್ಯಾನ "ಏನು" ಎಂದು ಪ್ರಶ್ನೆ—

ಅದರ ಲಗಕ್ರಿಯಾಂಕಗಳು ೧ ೪ ೬ ೪ ೧ ಇವುಗಳ ಸಂಕಲನದಿಂದ ೧ ೪ ೬ ೪ ೧೧ = ೬ ಆಗುವುದು. ಇದೇ ಆ ಛಂದಸ್ಸಿನಲ್ಲಿರುವ ಒಟ್ಟು ವೃತ್ತಗಳ ಸಂಖ್ಯೆಯಾಗಿರುವುದು, ಅಥವಾ ಅದೇ ಛಂದಸ್ಸಿನ ಉದ್ದಿಷ್ಟಾಂಕಗಳು + ೧—

1 2 4 8
U U U U = ೧ + ೨ + ೪ + ೮ = ೧೫ + ೧ = ೧೬

(ಷಷ್ಠ ಪ್ರತ್ಯಯಂ)

ವ|| ಅಧ್ವಯೋಗಮಿಂತಕ್ಕುಂ—

ಕಂ|| ದ್ವಿಗುಣಿಸಿ (ಸು) ವೃತ್ತಮನದಱೊಳ್ |
[1]ಬಗೆದೊಂದಂ ಕಳೆದೊಡಕ್ಕುಮಂಗುಲಿ[2]ಗಳವಂ ||
[3]ಮಿಗಿಲಾಗಲಧ್ವಯೋಗಂ |
[4]ನೆಗಲ್ದುಪದೇಶದೊಳಪರಿಮಿತಂ ಪ್ರಸ್ತಾರಂ† || ೬ ||

[ ಅಧ್ವಯೋಗವೆಂಬುದು, ಆಯಾ ಛಂದಸ್ಸಿನ ಪ್ರಸ್ತಾರವನ್ನು ಹಾಕಲು ಎಷ್ಟು ಉದ್ದಗಲದ ಸ್ಥಳವು ಬೇಕೆಂಬುದನ್ನು ತಿಳಿಸುವ ವಿಧಾನ. ಆಯಾ ಛಂದಸ್ಸಿನ ವೃತ್ತ ಸಂಖ್ಯೆಗಳನ್ನು ದ್ವಿಗುಣಿಸಿ (ಎರಡರಷ್ಟು ಮಾಡಿ) ಅದರಲ್ಲಿ ಒಂದನ್ನು ಕಳೆದರೆ ಬರುವ ಸಂಖ್ಯೆಯಷ್ಟು ಅಂಗುಲಗಳು ಆಯಾ ವೃತ್ತಗಳ ಪ್ರಸ್ತಾರಕ್ಕೆ ಸಾಕಾದಷ್ಟು ಸ್ಥಳವಾಗುವುದು, ಮೂಱನೆಯ ಛಂದಸ್ಸಿನ ಅಧ್ವಯೋಗವೆಂತು ? ಮೂರನೆಯ ಛಂದಸ್ಸಿನಲ್ಲಿ ವೃತ್ತ ಸಂಖ್ಯೆ ೮, ಅದರ ದ್ವಿಗುಣ (೮+೨=೧೬) ೧೬ – ೧ (ಇದರಲ್ಲಿ ಒಂದನ್ನು ಕಳೆವುದು) =೧೫ ಇದು ಆ ಛಂದಸ್ಸಿನ ಅಧ್ವವು, ಎಂದರೆ ಹದಿನೈದಂಗುಲದಷ್ಟು ಸ್ಥಳದಲ್ಲಿ ಆ ಛಂದಸ್ಸಿನ ವೃತ್ತವು ಹರಡಿಕೊಳ್ಳು (ಪ್ರಸರಿಸು) ವುದು ಎಂದು ಭಾವವು ]

‡ಮ|| ಜಿತಬಾಣಂ ಹರ[5]ಯಂತಧಃಕೃತಮಯೂರಂ ತಾರ[6]ಕಾರಾತಿಯಂ |
ತತಿಮಾಘಂ ಶಿಶಿರಾಂತ್ಯದಂತೆ ಸುರಪಪ್ರೋಚ್ಚಂಡ ಕೋದಂಡದಂ ||
ತೆ ತಿರೋಭೂತಗುಣಾಢ್ಯನಬ್ಜಭವನಂತಾವಿರ್ಭವದ್ದಂಡಿ ಭಾ |
ರತಶ್ರೀದಂತಾತ್ತಧನಂಜಯೈಕವಿಭವಂ ವಾಗ್ಗುಂಫದೊಳ್ ಸಾಕಿಗಂ† || ೭ ||

---

(1) ತೆಗೆದೊಡದಂ (ಪಾ) ತೆಗೆದೊಂದಂ, (2) ಗಣನಂ (ಪಾ) ಗಳನುಂ (ಪಾ) ಗಣಿತಂ, (3) ಮಿಗಿಲಾಗಲ್ಪಥಯೋಗಂ (ಪಾ) ಮಿಗಲೞರದಧ್ವಯೋಗದೆ ಮಿಗಿಲಾರವಧ್ವಯೋಗಂ, (4) ನೆಗಲ್ದುಪ (ಪ) ಯೋಗದೊಳೆ (ಪಾ) ನೆಗಲ್ದಾದೆಡೆಯೊಳಗೆ, (5) ಯಂತಿರಲ್ ಪ್ರಿಯಮಯೂರಂ, (6) ಕಾವೈರಿಯಂತತಿ ಮುಗ್ಧಂ ಶಿಶಿರಾಂಶದಂತೆ ದಿವಿಜೇಂದ್ರೋದ್ದಂಡ

‡ ಈ ಪದ್ಯವು II ನಾಗವರ್ಮ ಕೃತವಾದ – ವಸ್ತುಕೋಶದಲ್ಲಿಯೂ ಇದೆ, ಇಲ್ಲಿ ಭ್ರಾಂತಿಯಿಂದ ಸೇರಿದೆ.

† ಅಧ್ವಯೋಗವನ್ನು ಹೇಳಿದ ಬಱಕ ಈ ಮುಂದೆ ಕೊಟ್ಟಿರುವ ಕೆಲವು ಪದ್ಯಗಳು ಹಲವು ಪ್ರತಿಗಳಲ್ಲಿವೆ.

ವ|| ಮಾತ್ರಾ ಪಿಂ(ಪೀ)ಡಮಿಂತಕ್ಕುಂ—

ಕಂ|| ನೆಗಟ್ದಿಕ್ಕರಂಗಳಂ ಮಾ |
ತ್ರೆಗ[1]ಳೊಳ್ ಕಳೆದಿಕ್ಕಿ ನಿಂದುವೆಲ್ಲಂ ಗುರು ಮೆ ||
ಲ್ಲಗೆ ಗುರುಗಳನಕ್ಕರದಿಂ |
ತೆಗೆ ಮಿಕ್ಕುವು ಲಘುಗಳಕ್ಕುಮಲಘುನಿತಂಬೆ || ೮ ||

ತ್ರಿಪದಿ–ಸಲೆ [2]ಗುರುಲಘುಗಳಂ ಕಲಸಿದಕ್ಕರ(ದ)ಪಿಂಡಂ |
ನೆಲಸಿದ ಗುರುವಂ ದ್ವಿಗುಣಿಸಿ ಲಘು ಕೂಡಿ |
ನಿಲೆ ಮಾತ್ರಾಪಿಂಡಂ ಮೃಗನೇತ್ರೇ || ೯ ||

ಚಂ|| ಇನಿತು ಪದಪಮಾಣ(ವ) ದು [3]ಕೆಟ್ಟುದು ಕಂದಮದೆಂತು ಬರ್ಕುಮಿಂ |
ಬಿನೊಳಿನೆ ಬರ್ಕು[4]ವೆತ್ತ ಗು(ಗ) ಣಸಂಖ್ಯೆಯನೊಂದನೆ ಕೂಡಿ ಲಬ್ಧದಿಂ ||
ಜನನುತ [5]ಶೇಷದಿಂದ ಮಱದೀಗಣ ಮೆಂದದನಿಟ್ಟುಕೊಂಡು ಮು |
ನ್ನಿನ ತೆಱದಿಂದಮೆತ್ತು [6]ಪದಿನಾಲ್ಕು ಗಣಂಗಳುಮೆಯ್ದುವನ್ನೆಗಂ ||೧೦||

ಮ||ಸ್ರ|| ಇದು ಕಾಣಲ್ಪಟ್ಟುದೀ ಕಂದದ ಪರಿ[7]ಮಿತಮುಂ ಪೇೞನಲ್ಕೊಂದು ಬೇಗಂ |
ಪದಿನಾಱುಂತಾಣದೊಳ್ ಪುಟ್ಟುವ ಗಣತತಿಯುಂ ತಮ್ಮೊ[8]ಳೊಂದೊಂದನಾಹ್ಲಾ ||
ದದಿನುರ್ಚಲ್ಕಲ್ಲಿ ಕಂಡಾಗಣದ ಕೆಳಗೆ ನಿಂದಾಗಣಪ್ರಾತ್ರಮುಂ ತ |
ಪ್ಪದೆ [9]ಬರ್ಕುದ್ದಿಷ್ಟ ಮಿಂತೀತೆಱನನಱಪುದಂಭೋಜಪತ್ರಾಯತಾಕ್ಷೀ* ||೧೧||

---

(1) ಳೊಳೆಕಳೆದಿಕ್ಕಿ ನಿಂದುವೇ ಗುರುವೆಲ್ಲಂ || ಮಿಗೆ...ಕ್ಕ ಮಂಬುಜವದನೇ (ಪಾ) ನಿಂದುವೆ ಗುರುಗಳಕ್ಕರದಿಂ | ತಿಗೆ ಮಿಕ್ಕವೆಲ್ಲ ಲಘುಗಳು ಮಕ್ಕುಮ ಲಘು (ಪಾ), (2) ಗುರುಲಘುಗಳುಂ... ...ರ ಪಿಂಡಂ | (3) ದುದವೆಂಬೊಡೆ ಛಂದ, (4) ಮೆಂತು ಗುಣಸಂಖ್ಯೆಯೊಳೊಂದನೆ... .. ಶೇಷದಿಂ || (ಪಾ) ವೆತ್ತುಗಣಂ, (5) ಲಬ್ಧದಿಂದ ಮಱಯಿಾಗಣ, (6) ಪದಿನಾಱುಗಣಂಗಳು ಮೆಯ್ದೆ ಬರ್ಪಿನಂ || (7) ದವಲೀಲೆಯಿಂದೊಂದು ಬೇಗಂ, (8) ಳೊಂದೊಂದಿವಾ | ಹ್ಲಾದದಿ ಬೆಚ್ಚುತಲ್ಲಿ (9) ಬರ್ಕುಂ ದೃಷ್ಟದಿಂ ತತ್ಕ್ರಮದೆ ವಿದಳಿತಾಂಭೋಜ.

* ಕಂ|| ಪದಿನಾಱು[10]ಕಲ್ಲನೋೞಯೆ |
ಮೊದಲಿಂ ಬರೆದಿಟ್ಟು ಮೂಱುಸೂೞತ್ತಿ ಮನೋ ||
ಮುದದಿಂ ಗಣಮಂ ನೆರಪಿದ |
[11]ಪದದೊಳೆ ನೀಂ ಪೇೞ್ವುದ(ದೆ) ಂಟ ಕಲ್ಗಳ ನಬಲೇ || ೧ ||

ಪ್ರಣುತ ನರನಾಥ ಸೆಡೆಯದೆ |
ರಣದೊಳ್ ಕರಮಣ್ಕಿ ಬಂದರಂ ಸಂಗರದೊಳ್ ||
ಪೊಣರಿ ಪೆಸರ್ಗುಂದಿ ಮಣಿಯದೆ |
ರಣದೊಳ್ ಹರಿಯಂತೆ ನಿಂದರಂ ಸಂಗರದೊಳ್ || ೨ ||

(10) ಕಲ್ಲುಗೋೞಯನದಿರದೆ ಬಗೆದಿ(ಪಾ) ಕಲ್ಲನೊರಿಯೆ, (11) ಪದಪಿಂದಂ ಪೇೞ್ವುದಂ.

*ಚಂ|| ದಿವಸಕರಾಂಬು ದೇವ [1]ಮರುದಂಬರ ಭೂಮಿಶಶಾಂಕ ವಹ್ನಿಯಿಂ |
ಬಿವು ದೊರೆಕೊಂಡು [2]ಬಂದ ಗಣಮೆಂಟಱಿಕೊಳಂ ನೆಗಳ್ದಿರ್ಕನಾದಿಯಂ ||

---

(1) ಮರ, (2) ವೀಗಣ...... ವುದು ಬಂದೊಡರ್ಮರ್ಕ್ಕನಾದಿಯಾ.

*ಕಂದ|| ಗುಣಕೆ ಪುರುಡಿಂಗೆ ತೊಡರ್ದೊಡೆ ।
ಮಣಿವ (ದೆ) ವರ್ ಷರಿದೆಯ್ದೆ ಸಂದರಂ ನೀಂ ಗೆಲಿದೈ ॥
ಸೆಣಸಿ ಬರೆ ಕಂಡು ತಡೆಯದೆ ।
ಪೊಣರ್ದುಂ [1]ಮಲೆತರನೆ ಕೊಂದು ಗೆಲ್ ತುಂಗಯಶ ॥ ೩ ॥

ವ|| ಅಲ್ಲಿಯೆ ಮುರಜಬಂಧಂ, ಗೊಮೂತ್ರಿಕಂ ಸರ್ವತೋಭದ್ರಂ, ಅಯ್ದಕ್ಕರಂ (ಷಟ್ಪದಿ) ತ್ರಿಪದಂ (ದಿ) ಚತುಷ್ಪದ (ಂತ್ರಿಪದಿ) ಮೋಱೆ ಮೊದಲಾದ ಅಯ್ದುಸಾವಿರದೆಂಟುನೂಱು ವೃತ್ತ ಜಾತಿಯುಂ, ನಾನಾ ಛಂದಂಗಳಿವಳಂ ಪುಟ್ಟಿದಪ್ಪುವು—

ಕಂ|| ಜಲಭೂಮಿನಿಶಾಕರ ಸುರ ।
ನಿಲಯಗಣಂ ಪ್ರಚುರಮಾಗೆ ಶುಭಮುಱಿದ ನಭ ॥
ಸ್ಥಲ ದಹನರವಿ ಮರುತ್ಸಂ ।
ಕುಲಗಣಮುಂ ಪ್ರಚುರಮಾಗಿ ಬರೆ ಕರಮಶುಭಂ ॥§

ಒಂದೆರಡು ಪ್ರತಿಗಳಲ್ಲಿ ಈ ಮುಂದಣ ಕೆಲವು ಪದ್ಯಗಳು ಹೆಚ್ಚಾಗಿವೆ, ಇವೆಲ್ಲವೂ ಕವಿಜಿಹ್ವಾ ಬಂಧನದ ಪದ್ಯಗಳಾಗಿವೆ (ಇವುಗಳಲ್ಲಿ ಹೊಸಗನ್ನಡ ಪ್ರಯೋಗಗಳಿವೆ) ಹಸ್ತಲಿಖಿತ ಪ್ರತಿಗಳ ಸ್ವರೂಪವನ್ನು ತಿಳಿಸುವುದಕ್ಕಾಗಿ ಇಲ್ಲಿ ಕೊಟ್ಟಿದೆ—

ಕಂ|| ಸ್ವರಗಳು ಪುಲ್ಲಿಂಗಂ ತಾಂ ।
ನಿರುತಂ ಷಡ್ವ್ಯಂಜನಂಗಳವು ಸ್ತ್ರೀ ಲಿಂಗಂ ||
ಗುರುಕುಚೆ ಬಿಂದುವಿಸರ್ಗೋ ।
ತ್ಕರವೆಂದವ್ಯಂಜನಂ ನಪುಂಸಕಲಿಂಗಂ ॥ ೧ ॥

ಕಚಟಸ್ವರ ವಿಪ್ರಕುಲಂ ।
ಪ್ರಚುರಂ ತಪವರ್ಗವೆರಡು ನೃಪಕುಲಜನಿತಂ ||
ಸಚಕಿತಶಷಸಹ ವೈಶ್ಯಂ |
ಉಚಿತವಚನೆ ಉಱಿದುವಾಱು ಶೂದ್ರಾಕ್ಷರಗಳ್ ॥ ೨ ॥

(1) ನೆರೆದ ನೆರೆದರನೆಕೊಂದು (ಪಾ).

§ ಒಂದು ಪ್ರತಿಯಲ್ಲಿ ಈ ಪದ್ಯವಾದಮೇಲೆ "ಧರೆಯಿಂ ಶ್ರೀ" "ಆಶೀರ್ವಾದದೊಳುರ್ವಿ" "ಪನ್ನೆರಡು—" "ಗುರುವೊಂದಾಗಿರಲಂದು" ಈ ಪದ್ಯಗಳಿವೆ, ಕೊನೆಯಲ್ಲಿ "ಅಂತು ನಾನಾ ಛಂದಸ್ಸಿನ ವೃತ್ತ ೧೩೩೨ ೧೭೭೨೬ಕ್ಕಂ ಮಂಗಳ ಮಹಾಶ್ರೀಶ್ರೀಶ್ರೀ, ಅದರ ಮುಂದೆ ೩೧ನೆಯ ಓಲೆ ಗಲಿತ ಬಳಿಕ ೩೭ನೆ ಪದ್ಯದ ಕೊನೆಯಿಂದ ೪೦ ಪದ್ಯಗಳವರೆಗೆ ಛಂದಸ್ಸಿನ ವಿಷಯವಿದೆ, ಬಳಿಕ ನಾಗವರ್ಮ ಸಮಾಪ್ತಂ- ಮಂಗಳ ಮಹಾಶ್ರೀಶ್ರೀ ಎಂದು ಬರೆದು "ತಪ್ಪಂ ಬರೆದಾತಂ" ಎಂಬ ಕಂದದೊಡನೆ ಗ್ರಂಥ ಪರಿಸಮಾಪ್ತಿಯಾಗಿದೆ.

ಗವನೆಣಿಸಿಟ್ಟು ಲೆಕ್ಕ1ಮಱಿದಿಂತುಟು ತಪ್ಪದೆ ನಾಗವರ್ಮನೀ|
ಭುವನದೊ2ಳಂಟರೆಲ್ಲ ಮಱಿವಂತು ಮನೋಹರಮಾಗೆ ಮಾಡಿದಂ ||೧೨||

ಮ|| ಅಱನಂ ಪಾಱಿಯುಮಂ ಪುದುಂಗೊಳಿಸಿ ಕೊಂಡೀಭೂಮಿಯಂ ಭೂಮಿಪರ್|
ನೆಱೆಯಾಳ್ಗಿಂದುಮಿಳಾತಳಂ ಬೆಳೆ3ಯುತಿರ್ಕೆಳ್ಗಾಲ4ಮಕ್ಕಲ್ದಿಯುಂ ||
ಬಱನುಂ ಪಿಂಗುಗೆ ನಾಗವರ್ಮಕವಿತಾಮಾಹಾತ್ಮ್ಯ5ಮೀ ಛಂದದೊಳ್|
6ನಿಱಿಗೊಳ್ಗಂ ಕವಿರಾಜಹಂಸನ ಮತಂ ಪರ್ಬಿರ್ಕ್ಕೆ ಭೂಚಕ್ರದೊಳ್‡ ||೧೩||

---

(1) ಮಱಿಯಿಸ್ಥಿತಿ ತಪ್ಪದು, (2) ಳಂಟಕಲ್ಲನಱಿವಂತಿರೆ ಪೇಳ್ದಪನಂಬುಜಾನನೇ|| (3) ವುದ ಕ್ಕೊಳ್ಗಾಲ, (4) ಮುಕ್ಕೆಳ್ವಱಂ, ಮುಕ್ಕೆಲ್ಲಿಯುಂ, (5) ಧಿಂ ಕಾವ್ಯದೊಳ್ ನೆಱಿಗೊಳ್ವಂ, (6) ನೆಱಿ.

*ವಿಷಮವೃತ ವಾಕುವೆಂಬಿವು|
ಸಂಮುಖ ಕವಿಗಳ್ಗಲವೆಂಬರ್ ಮನುಜರು ||
ಪುಸಿಯೆ ಬಹುದೋಷಗಳ ನಿ|
ಟ್ಟುಸಿರ್ದೊಡೆ ವಿಷವೇಕೆ ಖಡ್ಗವೇಕೆ ನಯೋಕ್ತೀ ||೩||
ನೊಂದರ್ ಬೆಂದರ್ ಮೋಹದಿ|
ಕಂದಿರ್ದರ್ ತೊಱನೊಳಿದೆಳಿದಿರ್ಯತ್ತಾ ||
ಮೊಂದಿದರಾಪತ್ತಂ ಕಳೆ|
ಗುಂದಿ ತರರೆಂದುಸಿರ್ದೊಡೆ ಶುಭ ನಾಂದ್ಯದ ಪದದೊಳ್ ||೪||

—(ಮುಂದೆ ಗ್ರಥವಿಲ್ಲ)—

‡ ಇಲ್ಲಿ ಈ ಎರಡು ಪದ್ಯಗಳು ಒಂದು ಪ್ರತಿಯಲ್ಲಿ ಹೆಚ್ಚಾಗಿವೆ (ಇವು ಛಂದಸ್ಸಿಗೆ ಸಂಬಂಧಿಸಿದಂತೆ ತೋರುವುದಿಲ್ಲ)—

ಮ|| ಸಿರಿ ಬಾಣಾನಲ ಚಂದ್ರದಿಗ್ಗಜ ಖರಾಂಭೋರಾಶಿಯುಗ್ಮಂಗಳಂ|
ಬರೆದಟ್ಟಲ್ ತೆಗೆದಾಗಳಬ್ಧಿ ಗುಣರತ್ನಾದಿದ್ವಯಂ ದ್ರವ್ಯ ಭೂ ||
ಶರಮೆಂಬೀ ಕ್ರಮದಿಂದಮೋ ಜೆಯೊಳೆ ಕೇಳ್ ಪಙ್ಕ್ತಿಕ್ರಮಂ ತಪ್ಪದಿಂ|
ದಿರದೋದಲ್ ಸಲೆ ಗೂಢಲೇಖನಮಿದುಂ ಪಂಕೇಜಪತ್ರೇಕ್ಷಣೇ ||

ಉ|| ಪನ್ನೆರಡಾದಿಯಾಗಿ ಸರಿತಾಣಮನಂದೆರಡಕ್ಕರಂ ಬರಂ|
ಸನ್ನುತದಿಟ್ಟು ಮತ್ತಭವನಿಂ ವಿಷಮಾಂಕಮ ನಿಂದುನೇಹಮಿ ||
ಪ್ಪನ್ನೆವರಂ ಬಱಿಕ್ಕೆ ವಿಷಮಗ್ರಹದಿಂದಿರದೊಂದನೊಂದನೆ|
ಯ್ದುನ್ನೆರಪಲ್ಕೆ ಪಿಂತಣವು ತೀರ್ವಿನೆಗಂ ಬರೆದೋದು ಬಾಲಕಿ ||

ಇದಾದ ಬಳಿಕ ಆಶ್ವಾಸಾಂತ್ಯಗದ್ಯವಿದೆ, ಮತ್ತೆ ಅಲ್ಲಿಂದ ಮುಂದೆ "ಬಿಂದುವಿಸರ್ಗಂ" "ಗುರುವೊಂದಂ ಲಘುವೊಂದಂ" ಮೊದಲಾದ ೩೭ ಪದ್ಯಗಳಿರುವುವು, ಮುಂದೆ ಗ್ರಂಥವು ಇದ್ದಕ್ಕಿದ್ದ ಹಾಗೆಯೇ ನಿಂತಿದೆ

ಉ|| ಮಂದರಶೈಲದಂತೆ ದಿವಿಜಾಪಗೆಯಂತೆ ಪಯೋಧಿಯಂತೆ ಪೆಂ |
ಪಿಂ ದೊರೆವೆತ್ತ ದೇವಕುಲದಂತೆ ದಿಶಾಗಜರಾಜಿಯಂತೆ ಸೂ ||
ರ್ಯೇಂದುಗಳಂತೆ ತಾರಗೆಗಳಂತೆ ಸನಾತನವೇದದಂತೆ ನಿ |
ಲ್ಕೆಂದುಮವಿಘ್ನತಾಪ್ರಸರಮಿಂತಿದು ಕೂಡೆ ಸಮಸ್ತ ಧಾತ್ರಿಯೊಳ್ * ||೯||

## ಗದ್ಯಂ

ಇದು ಸಕಲಸುರಾಸುರೇಂದ್ರ ಮಣಿಮಕುಟ ಘಟಿತ †ಶ್ರೀಮತ್ಪರಮೇಶ್ವರ
ಚಾರು ಚರಣಾರವಿಂದ ಮರಂದ ಮಧುಕರಾಯಮಾಣ
ವಿಬುಧಜನಮನಃ ಪದ್ಮಿನೀರಾಜಹಂಸ
**ಶ್ರೀಮತ್ಕವಿರಾಜಹಂಸ**
ವಿರಚಿತಮಪ್ಪ
**ಛಂದೋಂಬುಧಿಯೊಳ್**
ಷಟ್ಪ್ರತ್ಯಯವಿವರಣಪ್ರಕರಣಂ
**— ಷಷ್ಠಾಧಿಕಾರಂ —**
**—ಛಂದೋಂಬುಧಿ ಸಂಪೂರ್ಣಂ—**
ಮಂಗಳ ಮಹಾ ಶ್ರೀ ಶ್ರೀ ಶ್ರೀ ಶ್ರೀ .



---

*ಈ ಪದ್ಯವು ಕಾವ್ಯಾವಲೋಕನದಲ್ಲಿ (ಎರಡನೆಯ ನಾಗವರ್ಮ ಕೃತ ೧೧೨೫) ದೆ.

† ಭಗವದ್ಭವಾನೀವಲ್ಲಭ ಪಾದಾರವಿಂದ ದ್ವಂದ್ವ ಮಕರಂದ ಮತ್ತ ಮಧುಕರಾಯಮಾಣ ಸುಕವಿ ಜನ ಸಂಸ್ತೂಯಮಾನ... ..... ನಾಗವರ್ಮ ವಿರಚಿತಮಪ್ಪ......... ಷಷ್ಠಂ ಷಟ್ಪ್ರತ್ಯಯ ವಿವರಣ ಪ್ರಕರಣಂ (ಪಾ),

ಇದು ಪರಮೇಶ್ವರ ಚಾರುಚರಣಾರವಿಂದ ದ್ವಂದ್ವ ಮಕರಂದಮತ್ತ ಮಧುಕರಾಯಮಾಣ ವಿಬುಧ ... ...ರಾಜಹಂಸ ವಿರಚಿತ...... ಷಟ್ಪ್ರತ್ಯಯ ಷಷ್ಠಾಧಿಕಾರಂ ಸಮಾಪ್ತಂ,

ಇದು ಸಮಸ್ತಸುರಾಸುರೇಂದ್ರ ಮುನೀಂದ್ರ ಮಣಿಮಕುಟ ಘಟಿತ ಶ್ರೀಮದ್ಭಗವದರ್ಹತ್ಪರಮೇಶ್ವರ ಪಾದಾರವಿಂದ ದ್ವಂದ್ವ......ನಾಗವರ್ಮ ವಿರಚಿತಮಪ್ಪ ಛಂದೋಂಬುರಾಶಿಯೊಳ್ ನೆಗಳ್ದ ಷಟ್ಪ್ರತ್ಯಯ ವಿವರಾಧಿಕಾರಂ ಷಷ್ಠಾಶ್ವಾಸಂ.

(ಒಂದು ಪ್ರತಿಯ ಕೊನೆಯಲ್ಲಿ ಈ ಹೆಚ್ಚು ಪದ್ಯಗಳು ದೊರಕುವುವು)

ಷಟ್ಪ್ರತ್ಯಯಂಗಳ ಲಕ್ಷಣ ಸೂತ್ರಂ—

ಕಂ|| ನೀನಱಿ ಛಂದೋಂಬುಧಿಯೊಳ್ |
ಮಾನಿನಿ ಷಟ್ಪ್ರತ್ಯಯಂಗಳಂ ಪ್ರತ್ಯೇಕಂ ||
ಸಾನಂದದಿಂದೆ ಪೇೞ್ವೆಂ |
ಭೂನುತ ಸುಜನೌಘಮೆಲ್ಲಮಱಿವಂದದೊಳಂ ||೧||

**ಪ್ರತ್ಯೇಕ ಪ್ರಸ್ತಾರ ಲಕ್ಷಣಂ—**

*ಬರೆದ ಛಂದದ ಲಘುಗಳಂತಮಂ ಬರೆ ಮೊದಲ್ ಬರೆ ಮುಂದೆ ಗುರುಗಳಂ ಲಘುವಿಂದೆ ಮುಂದೆ ಸವೆ |
ಗುರುವಿನಡಿಯೊಳ್ ಲಘುವನಿಡು ಮುಂತೆ ತತ್ಸಮಂ ಭರೆ ಪಿಂತೆ ಗುರುವೊಂದನೇ ||
ಬರೆದುೞಿದೆಡೆ(ಗೆ)ಯು ಲಘುವಿನಿಂದೆ ಪೂರಿಸುವಲ್ಲಿ ಯಿರ ದಾಫಿಗೆಯ್ದುವನಿತುಂ |
ಗುರುಗಳಂ ಬರೆದು ಸರಸಿಜಾಕ್ಷಿ ಪಿಂತೆ ಲಘುವ ಬರೆ ಮೊದಲ ಲಘು ತರೆವಂತ್ಯವಡೆವಂನ್ನನಂ ||೨||

ನಷ್ಟದ ಲಕ್ಷಣಂ—

ಉ|| ಬೇರೆ ಲಘುಪ್ರಜಂಗಳೊಳಗಿಷ್ಟದ ವೃತ್ತದ ಸಂಖ್ಯೆ ತೋರ್ಪಿನಂ |
ನೀರೆ ಲಗಕ್ರಿಯಂಗಳನೆಮಾಡ್ಸಮೂಹದ ಕೂಟಸಂಖ್ಯೆಯೊಳ್ ||
ತೋಱಿದ ನಷ್ಟದಿಂಪೆಸೆವ ಲಕ್ಷಣಮಿಷ್ಟದ ನಷ್ಟಮೆಂಬುದಂ |
ಸಾರದೆ ಕೇಳ್ವಲಾಕ್ಷಣಿಕಸಂತತಿಗುತ್ಸವದಿಂತು ನಂಬು ಗ(ದ?)ಲ್ ||೩||

**ಉದ್ದಿಷ್ಟದ ಲಕ್ಷಣಂ—**

ಶಾ|| ಆರೆಂನಂ ಬೆಸಗೊಂಡ ಛಂದದ ಲಘುವ್ರಾತಂಗಳುದ್ದಿಷ್ಟದಾ |
ಧಾರಂ ಮಾಡೆಯುನಿತ್ತು ಸಂಖ್ಯೆಗೆಸೆವಾ ಛಂದಾಂಕದೊಳ್ ಪುಟ್ಟಿದಾ ||
ನಾರ್ಗಂ ದೋರ್ಪಲಗಕ್ರಿಯಾಪ್ರಜದ ವೃತ್ತಂಗಳ್ ಸಮಾನಂ ಬರಲ್ ||
ನೀರೇಜಾನನೆ ನೋಡೆ ಪೇೞ್ ತ್ವರಿತದಿಂ ಪ್ರತ್ಯೇಕದುದ್ದಿಷ್ಟಮಂ ||೪||

---

* ಈ ಪದ್ಯವು ತುಂಬಾ ಅಶುದ್ಧವಾಗಿದೆ, ಒಂದು ಪ್ರತಿಯಲ್ಲಿ ಮಾತ್ರ ದೊರಕುವುದರಿಂದ **ಶುದ್ಧ ಮಾಡಲಶಕ್ಯವಾಗಿದೆ**, ಇದು ಅಕ್ಕರವೃತ್ತವಿರಬಹುದು, ಹಾಗಿದ್ದರೆ ಇದು ತುಂಬಾ **ಪ್ರಾಚೀನವಾದ** ಪದ್ಯವು, ಹೀಗೆಯೇ ಇದರ ಮುಂದಿನ ಪದ್ಯಗಳೂ ಅಶುದ್ಧವಾಗಿವೆ

**ಸಂಖ್ಯಾನಕ್ಕೆ—**

**ಕಂ||** ವೃತ್ತಂಗಳ ಸಂಖ್ಯೆಯು ನಿರ |
ದೊತ್ತಲ್ಕಾ ಲಘುಗಳಿಂದೆ ಯಂತವು ಲಘುಗಳ್ ||
ಮತ್ತೆನ್ನದುೞಿದ ಬಿಣ್ಪಿನ |
ಮೊತ್ತಂಗಳೊಳಿೞಿಯೆ ಬಿಣ್ಪುಗಳ್ ಕಮಲಮುಖಿ ||೫||

**ಲಗಕ್ರಿಯೆಗೆ—**

**ಮ||ಸ್ರ||** ಬೆಸಗೊಂಡಾ ಛಂದದೊಂದಂಕಮೆ ಶಶಿ ಲಘುವೃತ್ತಂಗಳಿಂಟೆ (ಕ್ಕು) ಮತ್ತಾ |
(ಸಸಿ) ಶಶಿಯುಂ ಛಂದಾಂಕದಿಂದಂ ಕಳಿದುದನಾವೃತ್ತದಿಂದೊತ್ತಿನಿಂ ಬಾ ||
ಗಿಸೆ ಬರ್ಕುಂ ನೇತ್ರದಿಂ ತದ್ದ್ವಯಲಘುಗಳ ವೃತ್ತಂಗಳೀಯಂದದಿಂ ಭಾ |
ಗಿಸುತುಂ ಪೋಗಲ್ಕೆ ಬರ್ಕುಂ ಶಶಿಲಗಮೊದಲಾದಿಷ್ಟಸಂಖ್ಯಂ ಮೃಗಾಕ್ಷೀ ||೬||

**ಅಧ್ವಯೋಗಕ್ಕೆ—**

**ಕಂ||** ಎನಿತೆನಿತುವೃತ್ತಮುಂಟವ |
ರನಿತನಿತಂ ದ್ವಿಗುಣಿಸುತ್ತುಮೊಂದಂ ಕಳೆಯು ||
ಲ್ಕನಿತಂಗುಲಂಗಳಕ್ಕುಂ |
ವನಜಾನನೆ ಯಧ್ವಯೋಗದಾ ಪ್ರತ್ಯಯದೊಳ್ ||೭||

**ಉದ್ದಿಷ್ಟ ಫಲಂ—**

***ಕಂ||** ಒತ್ತೆರಡಱಿಂದೆ ಲಘುವಂ |
ಮತ್ತೆರಡಱಿನೊತ್ತು ಲಘುವನುರೆ ಕಳೆಯಲ್ ತ ||
ತ್ವೃತ್ತಮನಿತೆಂಬುದಂ ಮಿಗೆ |
ಮೆತ್ತದ್ವಿಪಗಮನೇ ಕೇಳ್ವುದುದ್ದಿಷ್ಟಫಲಂ ||೮||

**ಉದ್ದಿಷ್ಟದ ಲಕ್ಷಣಂ—**

**ಕಂ||** ಬೆಸಗೊಂಡುದನರ್ಧಿಸು ನೀಂ |
ವಿಷಮದೊಳೇಕಮನೆ ಕೂಡಿ ಕಳೆಯಿಸುಗುವೊಂ ||
ದೆಸೆದಿರೆ ಮಾಲಾವೃತ್ತಂ |
ಪೆಸರಂಬರೆ ನಷ್ಟವೃತ್ತಮಂ ಪೇೞಬಲೇ ||೯||

—ಇಲ್ಲಿಗೆ ಗ್ರಂಥವು ವಿರಾಮಹೊಂದಿದೆ—



*ಇವೆರಡೂ ಉದ್ದಿಷ್ಟದ ಲಕ್ಷಣಗಳೇ, ಬೇರೊಂದು ಗ್ರಂಥದುವೆಂದು ತೋರುವುದು.

# ೧ ಪರಿಶಿಷ್ಟ

## I ನೆಯ ಅಧಿಕಾರದಲ್ಲಿ

(೨೨ನೆಯ ಪದ್ಯವಾದಮೇಲೆ ಈ ಅಶುದ್ಧ ಪದ್ಯವಿದೆ)

ಕುಲತಿಲಕನೆನಿಸಿಯುಮಂ |
ಕಲಿಯುಗದೊಳ್ ವೆಂಗಿ... ... ಮೆಯ್ಯಂಗಂ ||
ಪುಟ್ಟಲ್ಕ...... ಉಚ್ಚೈಸಲುಂ ನಿ||
ರ್ಮಳಧರ್ಮದಿ ಪುಟ್ಟಿ ನಾಗವರ್ಮಕವೀಂದ್ರಂ ||೧||

(೭ನೇ ಪುಟದಲ್ಲಿ ೩೧ನೆಯ ಪದ್ಯವಾದಮೇಲೆ ಈ ಪದ್ಯಗಳಿವೆ)

ಕಂ|| ಈಶಂ ಪಾರ್ವತಿಯೊಳ್ ತಾಂ|
ಲೇಸಾಗಿರೆ ಛಂದದಂದಮಂ ನೆಱೆ ಪೇೞ್ದಾ ||
ಗಾಸಮಯದೊಳೀ ಪಿಂಗಳ |
ಲೇಸಾಗಿರಲಱಿದುಮವನಿಯೊಳ್ ಪರಪುವುದುಂ ||೧||

ಧರೆ [1]ಫಲಕವೃತ್ತಿಯಾದುದು |
ಧರಣಿಯಮೇಲಿರ್ದ ಮರನೆ ಲೆಕ್ಕಣಿಕೆ ಗಡಾ ||
ಪರಿವಿಡಿಯಿಂದೆಯ್ದಿರಲ್ |
ಮರುತಸುತಂ ಗಣಮನಿಡುತುಮಿರ್ದಂ ಗೌರೀ ||೨||

ದೇವಂ ದೇವಿಗೆ ಪೇೞ್ದುದ |
[2]ನಾವುದ ಪಿಂಗಳನೆ ಕೇಳ್ದು ಋಷಿಯರ್ಗಂ ಪೇ ||
ೞ್ದಾವಿಧವ ನಿನಗೆ ಪೇೞ್ದಪೆ |
ಭಾವಿಸಿ ಕೇಳ್ ಕೆಳದಿ ಛಂದಮಂ ಕ್ರಮದಿಂದಂ ||೩||

ಪ್ರಸ್ತಾರಮಾಗಿ ನುಡಿವುದು |
ವಿಸ್ತರದಿಂ ಸುಜನರೆನಿಪ ವಿದ್ವಾಂಸರೊಳಂ ||
ಪ್ರಸ್ತುತ ಸಭಾವದೊಳಗಾಂ |
ವಿಸ್ತರದಿಂದಱಿಯೆ ಪೇೞ್ವೆನಂಬುಜವದನೇ ||೪||

—ಇವು ಅನ್ಯಗ್ರಂಥದಿಂದ ಬಂದು ಸೇರಿದುವು—

---

(1) ಹಲಗೆವೃದ್ಧಿ, (2) ನಾವಂ.

(೯ನೇ ಪುಟದಲ್ಲಿ ೩೩ – ೩೪ರ ನಡುವೆ ಇರುವ ಪದ್ಯ)

ಕಂ|| ಇಂತು ಗುರುಲಘುವನಱಿ ನೀ |
ನಂತು ಕ್ರಮುಕ್ರಮದೆ ವೃತ್ತವೃತ್ತಂಗಳುಮಂ ||
ತಂತು ಪರಿಪರಿಯೊಳಱಿವಾ |
ದಂತವನಂತಂಗಳಕ್ಕುಮಂಬುಜವದನೇ ||೫||

(೧೦ನೇ ಪುಟದಲ್ಲಿ ೩೮ನೆಯ ಪದ್ಯವಾದಬಳಿಕ ಈ ೩ ಪದ್ಯಗಳಿಗೆ ಎಲ್ಲವೂ ೩೮ರ ಅನುವಾದಗಳು)

*ಕಂ|| ಆದಿಯ ಮಧ್ಯಾಂತದೆ ಗುರು |
ವಾದೊಡೆ ಶಶಿ ಸೂರ್ಯ ವಾಯು ಗುರುವಿರೆ ಧರೆ ಮ ||
ತ್ತಾದಿಯ ಮಧ್ಯಾಂತದೆ ಲಘು |
ವಾದೊಡೆ ಜಲವಹ್ನಿ ಗಗನ ಲಘುವಿರೆ ನಾಕಂ ||೬||

ಗುರು ಲಘು ಮೂಱರೆ ಮನಗಣ |
ಗುರು ಲಘು ಮೊದಲಲ್ಲಿ ಬರಲು ಭಯುಗಣ ಮತ್ತಾ ||
ಗುರು ಲಘು ನಡುವಿರೆ ಜರಗಣ |
ಗುರು ಲಘು ಕಡೆಯಲ್ಲಿ ಬರಲು ಸತಗಣಮುಕ್ಕುಂ ||೭||

ಮಗಣಂ ಭೂಮಿಯೆನಿಕ್ಕುಂ |
ಯಗಣಂ ಜಲ ರಗಣಮಗ್ನಿ ಸಗಣಂ ವಾತಂ ||
ತ ಗಣಾಂಬರ ಜಗಣಾರ್ಕಂ |
ಭಗಣಂ ಶಶಿ ನಗಣನಾಕಮಂಬುಜವದನೇ ||೮||

(೧೦ನೇ ಪುಟದಲ್ಲಿ ೪೧ - ೪೨ನೆಯ ಪದ್ಯದ ನಡುವೆ)

ಮ|| ಜಲದಿಂದಾಯು ಧರಿತ್ರಿಯಿಂ ಮಹಿಮೆಯುಂ ಪದ್ಮಾರಿಯಿಂ [1] ಭೋಗಮುಂ |
ಬಲವಂತಾ ಸುರಸದ್ಮದಿಂ [2] ರವಿಯೊಳಂ ಸರೋಗಿ ? ಸಾವಹ್ನಿಯಿಂ ||
ತಿಳಿಯಲ್ ಶೂನ್ಯನಭಂ ಸಮೀರಣನಿನಾಸ್ಥಾನಚ್ಯುತಂ ಗರ್ಭದೊಳ್ |
ನೆಲಸಲ್ಕಾವ್ಯಮನೊಪ್ಪುಗೊಂಡನೞಗುಂ ಸುವ್ಯಲಕ್ತ್ರಾಧರೇ ||

---

(1) ಯೋಗ್ಯಮುಂ, (2) ತರಣಿಯಿಂ ರೋಗಂ ಮೃತಂ ವಹ್ನಿಯಿಂ| ಸಲೆಶೂನ್ಯತ್ವಮುಮ ಭ್ರದಿಂ ಮರುತನಿಂ ಸ್ಥಾನಚ್ಯುತಂ ಸಾರ್ಗುವಿಾ || ನೆಲೆಯುಂ ಕಾಣವೆ ಪೇೞ್ದ ಕಾವ್ಯಮುೞಗುಂಸುವ್ಯ ||

* ಇದು ಈ ಸಂಸ್ಕೃತದ ಪದ್ಯದ ಭಾಷಾಂತರ—

ಆದಿಮಧ್ಯಾವಸಾನೇಷು ಯರತಾ ಯಾಂತಿ ಲಾಘವಂ |
ಭಜಸಾ ಗೌರವಂ ಯಾಂತಿ ಮನೌತು ಗುರುಲಾಘವಾ || (1)

(೧೦ನೆಯ ಪುಟದಲ್ಲಿ ೪೩ನೆಯ ಪದ್ಯದ ಮುಂದೆ ಇರುವ ಪದ್ಯಗಳು)

ಕಂ|| ಭೂಮಿಜಲಮಿಂದು ಸಗ್ಗದೆ |
ಕಾಮಿತಫಲದಾಯಿಯಕ್ಕು ರವಿಶಿಖಿ ಪವನಂ ||
ವ್ಯೋಮಂಗಣಂ ಪುಗಲಾಗದು |
ಸಾಮಾನ್ಯಂ ಕಾವ್ಯಗೀತವೆರಡಱ ದೆಸೆಗಂ || ೧ ||

ಕವಿತೆಗೆ ಗಣ ಮೆಂಟಱೊಳಂ |
ದಿವಿ ಭೂಮಿ ಚಂದ್ರ ತೋಯಮಿವು ಶುಭದಂಗಳ್ ||
ರವಿಶಿಖಿ ಪವನವ್ಯೋಮಂ |
ಕವಿತೆಗೆ ಕರಕಷ್ಟಮಪ್ಪೆ ನಾಂದೀಪದದೊಳ್ || ೨ ||

ಗಣಲಕ್ಷಣಂ—

ಮಗಣಂ ಗುರು ಮೂಱಾಗಿರೆ |
ಸೊಗಯಿಪ್ಪುದು ಧವಳವರ್ಣ ಧರೆಯಧಿದೈವಂ ||
ಮಿಗೆ ಭೂಸುರಕುಲಮದು ತಾ |
ನಗಣಿತಯಶಮಕ್ಕು ಮದಱಿನಂಬುಜವದನೇ || ೩ ||

ಮೊದಲ ಲಘುವಾಗೆ ಯಗಣಂ |
ಮುದದಿಂದಂ ನೀಲವರ್ಣ ಶೂದ್ರಕುಲಂ ತಾ ||
ನಧಿದೈವ ವರುಣನೆನಿಸುವು |
ದೊದವಿದ ಸಿರಿಯಕ್ಕುಮದಱಿನಂಬುಜವದನೇ || ೪ ||

ಗುರುವೆರಡಱ ಮಧ್ಯದೆ ಲಘು |
ವಿರಲಂ ತಾಂ ರಗಣ ರಕ್ತವರ್ಣಂ ಶಿಖಿ [1]ಮು ||
ತ್ತಿರಲಧಿದೈವಂ ಪಿತೃಗಳೊ |
ಳಿರಲದು ತಾಂ ಶೋಕ ತಾಪ ರುಜೆ ಲಲಿತಾಂಗಿ || ೫ ||

ಅಂತ್ಯಗುರುವಾಗೆ ಸಗಣ ಮ |
ದೆಂತೆನೆ ತಾಂ ಧೂಮ್ರವರ್ಣ ಮಾರುತ ದೈವಂ |
ಮುಂತೆನಿಪ ಕುಲಮೆ ಭುಜಗನು |
ಮಂತಾ[2]ಗಿರೆ ದೇಶವಿಭ್ರಮಂ ಮೃಗನಯನೇ || ೬ ||

---

(1) ಯುಂ । ಸ್ಫುರಿತಾಧಿದೈವ ಪಿತೃಕುಲ । ಮುರೆ ಶೋಕಂ ತಾಪರುಜೆಗಳೆಲೆಲಲಿತಾಂಗಿ ॥
(2) ಗಿ ವಿದೇಶಗಮನಮಂಬುಜವದನೆ,

ಕಡೆಯು ಲಘುವಾಗೆ ತಗಣಂ |
ಪಡೆವೊಡೆ ತಾಂ ಕೃಷ್ಣವರ್ಣ ಪೌಷ್ಕರ ದೈವಂ ||
ಗಡ ಭೂತಕುಲವುದಾಗಿರೆ |
ಕಿಡುಗುಂ ಸಂಪತ್ತು ಸರ್ವಹಾನಿ[1]ಯು ಮಾಳ್ಕುಂ ||೭||

* ಮಧ್ಯೆಗುರುವಾಗೆ ಜಗಣಮು |
ದುದ್ಯತ ಬಂಧೂಕವರ್ಣ ಭಾಸ್ಕರ ದೈವಂ ||
ಶುದ್ಧರ್ಷಿಕುಲವುದಾಗೆ ಸ |
ಮುದ್ಧತದಿಂ ಕೆಡುಗು ಕಾರ್ಯಮಬ್ಜದಳಾಕ್ಷೀ ||೮||

ಆದಿಗುರುವಾಗೆ ಭಗಣಂ |
ಭೇದಿವೊಡದು ಸ್ಫಟಿಕವರ್ಣ ವೈಶ್ಯಂ ಕುಲದಿಂ ||
ಆದರಿಸೆ ಚಂದ್ರದೈವಂ |
ಮೇದಿನಿಯೊಳಗರ್ಥಸಿದ್ಧಿಯಬ್ಜದಳಾಕ್ಷೀ ||೯||

ಮೂಱು ಲಘುವಾಗೆ ನಗಣಂ |
ತೋಱಲ್ಕದು ಸ್ವರ್ಣವರ್ಣ ಕ್ಷತ್ರಿಯಕುಲ ತಾಂ ||
ಸಾಱುತಿರಲಿಂದ್ರ ದೈವಂ |
ನೂಱ್ಪರ್ತ್ತಬ್ಧ ತನಕ ಸುಖದಿಂ ಬಾಳ್ವರ್ ||೧೦||

ಮಯರಸತ ಜಭಗಣಾಳಿಗೆ |
ನಯಂ ಬುಧಂ ಶುಕ್ರ ಭೂಮಿಸುತರವಿತನಯರ್ ||
ಪ್ರಿಯೆ ಕೇಳ್ ಗುರುರವಿಚಂದ್ರರ್ |
ಪ್ರಯುಕ್ತರಾಗಿರ್ಕುಮಾಗ್ರಹಂಗಳ್ ಕ್ರಮದಿಂ ||೧೧||

ಮೂಡಲ್ ನಗಣಮದಿರ್ಕುಂ |
ನೋಡಲ್ ದಕ್ಷಿಣದೆ ಮಗಣಮಿರ್ಕುಂ ಸತತಂ ||
ಬೀಡಾ ಪಶ್ಚಿಮ ಯಗಣಕೆ |
ಗಾಡಿಯೊಳುತ್ತರಮೆ ಭಗಣಕಕ್ಕುಂ ತಾಣಂ ||೧೨||

---

(1) ಹಾನಿಗಳಕ್ಕುಂ.

* ನಡುವೆ ಗುರುವಾಗೆ ಜಗಣಂ। ಬೆಡಗಿನ ಬಂಧೂಕವರ್ಣ ಭಾಸ್ಕರದೈವಂ ॥
ಒಡನೆ ಋಷಿಕುಲಮುಮದಱಿಂ। ತಡೆಯದೆ ಕಾವ್ಯಹಾನಿಯಕ್ಕು ಲತಾಂಗಿ ॥ (ಪಾ)
(ಈ ಪದ್ಯವು ಒಂದು ಪ್ರತಿಯಲ್ಲಿದೆ.)

ಕಂ|| ರಗಣಮದಗ್ನಿಯೊಳಿರ್ಕುಂ |
ಜಗಣಂ ನೈಋತ್ಯದಲ್ಲಿ ವಾಯುವ್ಯದೊಳಂ ||
ಸಗಣಮದಿರ್ಕುಂ ನಿರುತಂ |
ತಗಣಮುಮೀಶಾನ್ಯದಲ್ಲಿ ನೆಲಸಿಹುದಬಲೇ ||೧೩||

ಇನನಿಂದಂ ಕೇಡಕ್ಕುಂ |
ವನಜಾರಿತನಯನಿಂದೆ ಕಲಹಮದಕ್ಕುಂ ||
ಕನಕನೊಳೆ ಕಷ್ಟಮಕ್ಕುಂ ||
ಶನಿವಾರದೆ ಮರಣಮಕ್ಕುಮಂಬುಜವದನೇ ||೧೪||

ಇಂದುವಿನೊಳ್ ಲೇಸಕ್ಕುಂ |
ಕುಂದದೆ ಸುರಗುರುವಿನಲ್ಲಿ ಧನದಾಗಮಮುಂ ||
ಇಂದುಮುಖಿ ಶುಕ್ರವಾರದೆ |
ಕಂದವ ಪದಪದ್ಯವೇಱಿ ಶುಭಕರಮಕ್ಕುಂ ||೧೫||

ಎರಡು ಭುಜಂ ರವಿಚಂದ್ರ |
ಗುರುಫರಿ ಜಲವಹ್ನಿ ಗಣಗಳಿಗೆ ಭುಜನಾಲ್ಕುಂ ||
ಕರವಾಱು ಪಾವಪಾಸಗೆ |
ಹರಿಗೆಂಟುಂ ನಾಕಗಣಕೆ ದಶಭುಜಮಕ್ಕುಂ ||೧೬||

ಅಜಷಛಝಂತಗಳೆಂಬಿವು |
ಸಚಕಟಹಯಮೆಂಬಿವಾಱು ವರ್ಜ್ಯಾಕ್ಷರಮು ||
ಪ್ರಚುರಿತ ಗುರುಗಳಮಾಡಿಸು |
ವಚನೆಯೊಳಿಡೆ ಪದ್ಯವದಕೆ ನಿರ್ದೋಷಕರಂ ||೧೭||

ಅಚನರಜವಿಡಿದು ಮೊದಲೊಳ್ |
ವಚನಾಂತ್ಯದೊಳದ್ರಿ ಋತುದಶೈಕಾದಶದೊಳ್ ||
ಸಚಕಟ ಹಯಮಿವು ಬಾಹ್ಯಂ |
ಪ್ರಚುರವಿವೆಂದಱಿವುದರ್ಕೆ ಲಕ್ಷಣಮಿದಱಿಂ ||೧೮||

ಆಕಾರದಿನಱಿವಕ್ಕುಂ |
ಚಾಕಾರದೆ ಚಮತ್ಕೃತಿಯೆ ಸಂಪದ ಕೆಡುಗುಂ ||
ನಾಕಾರದಿಂದೆ ಶೂನ್ಯಂ |
ರಾಕಾರದೆ ರುಜೆಯುಂ ಮರಣ ಜಾಕಾರದೊಳಂ ||೧೯||

ಋತು ಸಪ್ತ ದಶೈಕಾದಶ |
ವತಿ ಕಷ್ಟಂ ಸಚಕಟಾಹ್ವಯಂಗಳ್ ಪುಗಲು ||
ನ್ನತಿ ಕೆಡುಗುವಮಾಯು ನಾಶಂ |
ಕ್ಷಿತಿಯೊಳಗಪಶಬ್ದ ಮಾದುದಂಬುಜವದನೇ ||೨೦||

ಅಕ್ಷರ ಹೀನಮುದಾಗೆ ಧ |
ನಕ್ಷಯುಮಂ ಮಾಳ್ಕುಮಧಿಕಮಾದೊಡೆ ಸತ್ಕೀ ||
ರ್ತಿಕ್ಷಯಮಕ್ಕುಂ ಪೀಡೆಗೆ |
ಲಕ್ಷಣದಿಂ ಹಾನಿಯಕ್ಕುಮಂಬುಜವದನೇ ||೨೧||

ಹತವಿಷತಾಪಂ ಕೋಪಂ |
ಚ್ಯುತ ಶೋಕಾವಕ್ರ ದುಃಖ............ ||
.........ತಿವಿತನ ಶತ್ವಂ ತಂದ್ರಾ |
ದ್ಭುತ ವಾಕ್ಯಾದಿಯಾಗಲರಸಿಗೆ ದೋಷಂ ||೨೨||

ಶ್ರುತಿಕಷ್ಟಮರ್ಥದುಷ್ಟಂ |
ಯತಿಭಂಗ ಮನರ್ಥ ಮಖಿಲಲೋಕ ವಿರುದ್ಧಂ ||
ಕ್ಷಿತಿಪತಿಗಾಗದದೆಂತೆನ |
ಲತಿ ನೀರಸ ಕಾವ್ಯಮಿವಱಿಂ ಕೆಡುಗುಂ ||೨೩||

ಚರಣಂಗಳ್ ನಾಲ್ಕಱೊಳಂ |
ಪರಕಿಸೆ ಕರ್ತಂಗೆ ಕವಿಗೆ ಲೇಖಕನಪ್ಪಂ ||
ಗಿರದಕ್ಕುಮಪಾಯಂಗಳ್ |
ಚರಣಾಂತ್ಯದೊಳೋದುವಂಗೆ ದುಷ್ಕರಮಕ್ಕುಂ ||೨೪||

ನಷ್ಟದೊಳೆ ಪೇೞಲಾಗದ |
ನಿಷ್ಟಂಗಳ್ ತೋರ್ಕುಱ ನಡೆವ ವೃತ್ತಂಗಳೊಳಂ ||
ಇಷ್ಟಾರ್ಥಸಿದ್ಧಿಯಕ್ಕುಮ |
ನಿಷ್ಟಂ ಪರಿಹರಿಸಿ ಪೋಕುಮಂಬುಜವದನೇ ||೨೫||

ನಲ್ಲಳೆ ಪದವಿಡುವೆಡೆಯೊಳ್ |
ಪಲ್ಲವದೊಳ್ ಪದದೊಳುಭಯಗಣ ಸಮನಾಗಲ್ ||
ಸಲ್ಲಲಿತ ಕೀರ್ತಿಯಾದಪು |
ದಲ್ಲದೊಡಾ ಕೃತಿಗೆ ಹಾನಿ ತಪ್ಪದೆ ಬರ್ಕುಂ ||೨೬||

ಒಂದು ಪ್ರತಿಯಲ್ಲಿ ೪೨ನೆಯ "ಧರೆಯಿಂಶ್ರೀ" ಎಂಬ ಪದ್ಯವು ೨೫ನೆಯ ಪದ್ಯವಾಗಿ ಅಲ್ಲಿಂದ ಮುಂದೆ ಈ ಪದ್ಯಗಳಿವೆ—

ಕಂ|| ಮಗಣಂ ಪಾಟಲಿ ವಿಪ್ರಂ |
ಯಗಣಂ ಶೂದ್ರಂ ಸುನೀಲಮಾರಕ್ತಂ ರಂ ||
ಮಿಗೆ ಪಿತೃಗಣ ಬಾನ್ವರ್ಣಂ |
ನೆಗಲ್ದ ನಹಿಕುಲಮಾತ ಮೆಸೆವ ಕೃಷ್ಣಂ ಭೀತಂ ||೨೬||

ಜಂ ಬಂಧೂಕಾಭಂ ರಿಪ |
ಭಂ ಬಾಲ್ದ ಸ್ಫಟಿಕವೆಸೆವವೈಶ್ಯಂ ನಗಣಂ ||
ಬಿಂಬಪತೀತಂ ಕ್ಷತ್ರಿಯ |
ಮೆಂಬಿ ಕೆಲಸಂ ಶರ್ವಂ ವಿಚಾರಿಸು ಕಾಂತೇ ||೨೭||

ಯತಿಯೆಂಬುದು........... ||೨೮||

ಇಚ್ಛಂತಿ ಯತಿಂ ವಸಿಷ್ಠ ಕೌಂಡಿನ್ಯ ಕಪಿಲಾದಯಃ ||
ನೇಚ್ಛಂತಿ ಭರತಕೋಹಳ ಮಾಂಡವ್ಯಾಶ್ವರತರಾಃ ಕೇಚಿತ್ ||೨೯||

ನಿಜಮೇ ಸಿಂಗಂ ದೀರ್ಘಂ |
ಗಜ...... ವ್ಯಂಜನ........ ಮ ||
ತ್ತಂಜನೆ ವಿಸರ್ಗಂ ದ್ವಿತ್ವ |
ವಜಾಯಂತ್ಯ ವಿಚಾರಿಸಲ್ ಷಟ್ಪ್ರಾಸಂ ||೩೦||

ಸಿಂಗದಿನತಿ ಸಂಪದ ಮಾ |
ತಂಗದಿನರ್ಥಾಪ್ತಿ ವೃಷಭನಿಂ ಶುಭಕರಮಾ ||
ಭಂಗಂ ಶರಭನಿನಜನಿಂ |
ತುಂಗಾರಿಷ್ಟಂ ತುರಂಗದಿಂ ಸಿರಿ ಬರ್ಕುಂ ||೩೧||

ನುತಶಬ್ದಾಲಂಕಾರ ............. ||೩೨||

................................

[1]ಒಂದೊಂದಱ ಸೌಂದರ್ಯಮ |
ನೊಂದೊಂದೀಕ್ಷಿಸಲೊಡರ್ಚೆ ನಾಸಿಕವಡ್ಡಂ ||
ಬಂದಂದಮನೀಕ್ಷಿಸೆ ಪೆಱ |
ಗಿಂದೀಕ್ಷಿಸುಗುಮವಳ ನಿಡಿಯೆಸಳ್ಗಣ್ಗಳ್ ||೫೦||

(1) ಕವಿರಾಜ, ಪರಿ. ೩, ಪ. ೨೩೪.

( ಕಿಟ್ಟೆಲ್‌ರವರ ಮುದ್ರಣದಲ್ಲಿ ೪೪ನೆಯ ಪದ್ಯವಾದ ಬಳಿಕ ಈ ಕೆಳಗೆ ಕಂಡ
ಈ ಕೆಲವು ಪದ್ಯಗಳಿವೆ)

*ಮ|| ಅಸದರ್ಥಂ ವಿಪರೀತಕಲ್ಪನೆಯಭವ್ಯಂ ದುಷ್ಕರಂ ಗ್ರಾಮ್ಯನೀ|
ರಸಮಪ್ರೌಢತೆಯಪ್ರತೀತಿವಚನಂ ದುಸ್ಸಂಧಿ ವಿಶ್ಲೇಷ ನ ||
ಷ್ಟಸಮಾಸಂ ನಯನಾಶರೀತಿ ವಿಫಲಂ ದುರ್ಲಕ್ಷ್ಮಣಂ ಹಾಸ್ಯವಾಗ್ |
ವಿಷಮಾಸೌಮ್ಯಮನೋಜೆಯೆಂಬಿವಿನಿತುಂ ದೋಷಂಗಳಷ್ಟಾದಶಂ ||೧||

(ಇಲ್ಲಿಂದ ಮುಂದಿರುವ ಪ್ರಾಸಿನ ವಿಷಯವನ್ನು ತಿಳಿಸುವ ೩ ಪದ್ಯಗಳನ್ನು ಹಿಂದೆ ಕೊಟ್ಟಿದೆ, (೪೩–೪೭)
ಮತ್ತೊಂದನ್ನು ಟಿಪ್ಪಣಿಯಲ್ಲಿ ಕೊಟ್ಟಿದೆ, (ನಿಜದಿಂ ಬಂದೊಡೆ) ಇವುಗಳ ಉದಾಹರಣೆಗಾಗಿ
ಕೊಟ್ಟಿರುವ ಪದ್ಯಗಳನ್ನು ಇಲ್ಲಿ ಕೊಟ್ಟಿದೆ)

ಕಂ|| ಸಕಳಕಳಾನಿಧಿ ನಿಕಟದೆ |
ಸುಕರರಸಪ್ರಕಟಕಾವ್ಯಮೆಂಬಮೃತಪಯೋ ||
ಧಿ ಕರಂ ಪೆರ್ಚುಗುವಲ್ಲದೆ |
ಕುಕವಿಬುಧಪ್ರಭೃತಿಯಿದಿರೊಳೇಂ ಪೆರ್ಚುಗುಮೋ ||೨||

—ಇದು ಸಿಂಗಪ್ರಾಸು.

†ಆರಾರೇಱರ್ ಶಾಸ್ತ್ರ |
ಶ್ರೀರೋಹಣಗಿರಿಯನಲ್ಲಿ ನವಕವಿತಾಚಿಂ ||
ತಾರತ್ನಂ ದೊರೆಗುಮೆ ತೇ |
ಜೋರೂಪಕ್ಕೆಪೆಯಿರದಂಗೆ ಧರಣೀತಳದೊಳ್ ||೩||

—ಇದು ಗಜಪ್ರಾಸು.

ಆನಂದನಮಂ ವಿಜಿತಮ |
ಹಾನಂದನಮಂ ನಿಜಾಂತರಾಳಾಶ್ರಿತಲೋ ||
ಕಾನಂದನಮಂ ತೋಷಿತ |
ಮಾನಂದನಮಂ ನಿರೀಕ್ಷಿಸಲ್ ನಡೆ ನೃಪತೀ ||೪||

—ಇದು ವೃಷಭಪ್ರಾಸು.

---

* ಇದು ಕಾವ್ಯಾವ ಲೇಕನದಲ್ಲಿದೆ, † ಇದು ರಾಜಶೇಖರ ವಿಲಾಸದಲ್ಲಿದೆ (ಷಡಕ್ಷರಿ ೧೬೦೪).

ಕಂ|| ಬಾಯ್ವಿಡುತೆಯ್ದಿದ ಮಱಿಯಂ |
ತಾಯ್ವಿಡಿ ನಡೆನೋಡಿ ಬಾಡಿ ತಾಪಂ ಮೊದಲಿಂ ||
ದೆೞ್ವಿಡಿ ನೆಗೞ್ದಿರಿರೆ ತೆಗೆದೇಂ |
ಕೆಯ್ಯೊವಿಡಿದುದಂದುಸೋಷ್ಣ ಜಲಮಂ ಬಸಿಱಿಂ ||೫||

—ಇದು ಶರಭಿಪ್ರಾಸು.

ನೀಂ ನಿಶ್ಶಂಕೆಯ ನೀದೇ |
ವಾಂ ನಿಶ್ಶರಣಜನರಿಂಗೆ ಶರಣಾಗೀಗಳ್ ||
ಕೇಳ್ ನಿಶ್ಶಮಮಂ ಪರಿಹರಿ |
ಸೀನಿಃಶಾಪ ಪ್ರಸಾದಮಂ ಕರುಣಾತ್ಮಾ ||೬||

—ಇದು ಅಜಪ್ರಾಸು.

ಮಲ್ಲಿಗೆಮೊಗ್ಗುಮರದೆಳೆದಳಿ |
ರಲ್ಲಿ ಮುಗುಱ್ತಿಡಱಿ ಮುಗುಳ್ಗಳೆಸೆದುವು ಸಂಧ್ಯಾ ||
ಸಲ್ಲಲಿತತಾರಕಾಳಿಯೊ |
ಲಲ್ಲಿಱಿವಾಱಡಿಗಳಿಱಿವ ತಮಮೆನಿಸಿರ್ಕುಂ ||೭||

—ಇದು ಅಶ್ವಪ್ರಾಸು.

(ಇಲ್ಲಿಂದ ಮುಂದೆ ಪ್ರಾಸಿನ ವಿಷಯವನ್ನು ತಿಳಿಸುವ ಕವಿರಾಜ ಮಾರ್ಗದಲ್ಲಿರುವ ಕೆಲವು ಪದ್ಯಗಳು ಕೆಲವು ಪ್ರತಿಗಳಲ್ಲೂ, ಕಿಟ್ಟೆಲ್‌ರವರ ಮುದ್ರಣದಲ್ಲೂ ಇರುವುವು, ಇವನ್ನು ಹಿಂದೆಯೇ ಕೊಟ್ಟಿದೆ (೪೮ ರಿಂದ ೫೫), ಇವುಗಳಲ್ಲಿ "ಪತ್ತಿಪ್ರವಾದ ಫಲಕಮರ" ಎಂಬ ಪದ್ಯವು ಕಿಟ್ಟೆಲ್‌ರವರ ಮುದ್ರಣದಲ್ಲಿಯೂ, ಕಾವ್ಯಕಲಾನಿಧಿ ಮುದ್ರಣದಲ್ಲೂ ಇಲ್ಲ)

(೫೫ನೆಯ ಪದ್ಯವಾದಬಳಿಕ ಈ ಮೂರು ಪದ್ಯಗಳು ಕೆಲವು ಪ್ರತಿಗಳಲ್ಲಿವೆ,
ಇವು ಕವಿರಾಜ ಮಾರ್ಗದ ಕೊನೆಯಲ್ಲಿವೆ)

ಕಂ|| ದ್ವಿಪ್ರಾಸಂ ಸುಭಗಂ ದ್ವಂ |
ದ್ವಪ್ರಾಸಂ ಕಾವ್ಯರಚನೆಗುಚಿತಮೆನಿಪ್ಪ ||
ತ್ರಿಪ್ರಾಸಂ ಸಲೆಯಂತಾ |
ದಿಪ್ರಾಸಂ ಬೇಱೆ ನಾಲ್ಕು ತೆಱನಾಗಿರ್ಕುಂ ||೧||

ಅರಸರೊಳೆಲೆ ನೀಂ ಸರಸವ |
ನರಸಿ ಮೆಱೆವೊಲಾಡುತಿರ್ಪೆ ನಿನಗಿದು ಗುಣವೇ ||
ಅರಸರ್ ಸರಸವ ಬಲ್ಲರೆ |
ಸರಸವನಾಡರಸರಲ್ಲದವರೊಳ್ ಮಗಳೇ ||೨||

—ಇದು ದ್ವಿಪ್ರಾಸಂ.

ಕಂ|| ವಿಮಲರ ಮಿತ್ರಂ ವಿಮಲಂ |
ವಿಮಲ ವಿನುತ ಮೂರ್ತಿ ವಿಮಲರೊಳಗತಿ ವಿಮಲಂ ||
ವಿಮಲ ನ್ಯಾಯದೆ ವಿಮಲಂ |
ವಿಮಲ ರುಚಿಮಯಂ ನಿರಂತರಕ್ಕಂ ವಿಮಲಂ ||೨||

—ಇದು ಆದ್ಯಂತಪ್ರಾಸಂ.

(೫೯ನೆಯ ಪದ್ಯವಾದಮೇಲೆ ಈ ಪದ್ಯಗಳು ಕೆಲವು ಪ್ರತಿಗಳಲ್ಲಿವೆ)

ಕಂ|| ಛಂದಮನಱಿಯದನೋದುಂ |
ಮುಂದಿರ್ದಾ ತಾಳದಳವನಱಿಯದ ಪಾಡುಂ ||
ಬಂದುದ ಕೆಡೆವನ ನುಡಿಯುಂ |
ಒಂದರ್ಕುಂ ಬಾರ್ತೆ (ಟ್ರ್ತೆ) ಯಿಲ್ಲ ಕೇಳಿಂದುಮುಖೀ ||೧||

ಗಿಳಿಯಂತೆ ಸೊಗಸಿ ನುಡಿವಳೆ |
ಕಳಹಂಸೆಗಳಂತೆ ಯಡಿಯನಿಡುವಳೆ ಮತ್ತಾ ||
ನಳಿನಾಕ್ಷಿ ಚಂದ್ರಮುಖದೊ |
ಳ್ವೆಳಗಿನ ವಧು ಕೇಳ ಕೆಳದಿ ನಿನಗಭ್ಯುದಯಂ ||೨||

ವೃತ್ತಸ್ತನಯುಗೆ ಕೇಳ |
ರ್ಸ್ತಾಱುಂ ಛಂದದಿಂದೆ ಪೇಳ್ದಪೆ ನಿನಗಾಂ ||
ಮತ್ತೆ ಜನಹಿತಮಿದೆಂಬುದ |
ಚಿತ್ತರದೊಳೆ ಕೇಳ ಕೆಳದಿ ನಿನಗಭ್ಯುದಯಂ ||೩||

ಚಂ|| ಮನಸಿಜ ಮಂತ್ರದೇವತೆಯೋ ಯಂತ್ರದ ದೇವತೆಯೋ ಪಿಡಾರಿಯೋ ||
ಮನುಜರೊಳಾವ ರೂಪವತಿಯೋ ಗುಣವಂತೆಯೊ ಎಂದು ಪೇಳ್ದಪೆ |
ನ್ನನುನಯದಿಂದೆ ಪೊಚ್ಚಪೊಸ ಜಾಣ್ನುಡಿಯಿಂದಮಿದಾದುದಿಂತುಟಂ |
ನಿನಗಿದು ಯುಕ್ತಿಯಪ್ಪೆನಗೆಪೇಳ್ದಪೆ ಕೇಳದನಂಬುಜಾನನೇ ||೪||

ಛಂದಮನೋದದೋದುವವರೋದುಗಳುಂ ನೆರೆ ಹಾಸ್ಯ ಲೋಕದೊಳ್ |
ಸಂದೆಯುಮಿಲ್ಲ ಛಂದಮನೆ ಪೂರ್ವಪರಂ ನೆರೆಯೋದಿದಂದು ನಿ ||
ಸ್ಸಂದೆಯುಮಪ್ಪುವೋದುವ ಪದಂಗಳಿಗೆಲ್ಲೆಡೆಯುಂ ವಿಚಾರಿಸಿಂ |
ಛಂದಮನೋದಿಯೋದುವುದೋದುಗಳಂ ಸರಸೀರುಹಾನನೇ ||೫||

## III ನೆಯ ಅಧಿಕಾರದಲ್ಲಿ

ಮಂದಾನಿಲಕ್ಕುದಾಹರಣಂಗಳ್—

ಆ ವೇಳೆಯೊಳತಿ ಸಂಭ್ರಮಮೆಸೆದಿರೆ |
ಪೂವಲಿ ಪುರವೀಥಿಗಳೊಳ್ ನೆಱೆದಿರೆ ||೧||

ಪವಳದ ರನ್ನದ ಗುದಿಗಳ ಗುಡಿಗಳ್ |
ನವಮೌಕ್ತಿಕರಂಗದ ದಾಂಗುಡಿಗಳ್ ||೨||

ಮೆಱೆದುವು ಮಿಱುಗುವು ಮಿಸುನಿಯ ತೋರಣ |
ಮಱೆಕೆಯು ಪುರಜನದುತ್ಸವದೋರಣ ||೩||

ಮಾನೆಯ ಮೇಲಣ ಪಱಿಯಿ (ವಿ) ಗೆ ಮಿಳರ್ದಿರೆ |
ನಾನಾವಿಧ ವಾದ್ಯಧ್ವನಿ ಯಳುರ್ದಿರೆ ||೪||

ಕರೆದುವು ಬಿರುದಿನ ಕಹಳೆಗಳಾಗಳ್ |
ಪರೆದುದು ಪಳಹದ ರವಮೆಣ್ದೆಸೆಯೊಳ್ ||೫||

ಗಿರಿ ಬಂಧುರ ಸಿಂಧುರತತಿ ನಡೆತರೆ |
ಚರವೃಂದದ ಕುಂದದ ಕಳಕಳಮಿರೆ ||೬||

ಪೊಸ ಮೇಳದ ತಾಳದ ಮೃದುನಿನದಂ |
ಪಸರಿಸೆ ಗೀತರವಂ ಕಡುಬಿನದಂ ||೭||

ಬಡೆದಿದಿರ್ವಂದುದು ರಾಜಪ್ರಚಯಂ |
ಬಿಡದೊಡವಂದುದು ನಾರೀ ನಿಚಯಂ ||೮||

ಶ್ರೀಕರುಣೇಶಾ ಶ್ರುತಿತತಿದೇಶಾ |
ಶೋಕನಿಘರ್ಷಾ ಶೋಭಿತಹರ್ಷಾ ||೯||

ಪ್ರೇಮನಿವಾಸಾ ಪ್ರಕಟಾಭಾಸಾ |
ಕ್ಷೇಮವಿಸರಣಾಕ್ಷಮಗುಣಭರಣಾ ||೧೦||

ಲಲಿತೆಗುದಾಹರಣಂಗಳ್—

ಅಲ್ಲಿ ಮಾಮರದಲ್ಲಿ ಮಲ್ಲಿಕಾಲತೆಯಲ್ಲಿ |
ಯೆಳಯಸುಗೆ ಮರದಲ್ಲಿ ಜಲರುಹಾಕರದಲ್ಲಿ ||೧||

ಸಂಪಗೆಯ ತರುಗಳೊಳ್ ಸೊಂಪಿಡಿದ ಸುರಯಿಯೊಳ್ |
ಪಾದರಿಯ ಬನದಲ್ಲಿ ಮಾಧವಿಯ ಲತೆಯಲ್ಲಿ ||೨||

ತಿಳಕ ಬಕುಳಾದಿ ತರುನಿವಹದಾರವೆಗಳೊಳ್ |
ದಳಫಲ ಕುಸುಮ ವಿಸರ ವಿದಿತ ವಿಟಪಂಗಳೊಳ್ ||೩||

ಪೂಗುಯ್ಯಲೆಂದಬಲೆಯರ್ ನೆರೆದು ಬಗೆದಂದು |
ಬೇಗದಿಂ ಪರಿತಂದು ಪರಿತೋಷದಿಂ ನಿಂದು ||೪||

---

ಸುಧೆ ದಧಿ ಘೃತಂ ಮಧು ಸದ್ವೈಕ್ಷವರಸಂಗಳಿಂ |
ಮಧುರತರ ಭಸಿತ ಮಿಶ್ರಿತ ಸತಜಳಂಗಳಿಂ ||೧||

ಹಿಮವಿಮಳ ಮಳಯಜ ಸುಗಂಧಾನುಲೇಪದಿಂ |
ಕಮಳರಿಪುಧವಳ ಕಳಮಾಕ್ಷತ ಕಳಾಪದಿಂ ||೨||

ಪರಿಮಳ ಮಿಳಿತ ದಳಿತ ನಳಿನ ಕುಮುಂದಂಗಳಿಂ |
ಸರಸಚಂಪಕವಕುಳ ತಿಳಕಕುಸುಮಂಗಳಿಂ ||೩||

ದಮನಮರುವಕ ಬಿಲ್ವಪಲ್ಲವನ್ತ್ರೋಮದಿಂ |
ಕಮನಘೃತಸಹಿತ ಗುಗ್ಗುಳ ಧೂಪಧೂಮದಿಂ ||೪||

ಪ್ರಚುರ ಶುಚಿ ರುಚಿರ ರುಚಿಮಣಿ ದೀಪಮಾಲೆಯಿಂ |
ರಚಿತ ರುಚಿ ನಿಚಿತ ಶುಚಿ ಸಾಜ್ಯ ಭೋಜ್ಯಾಳಿಯಿಂ ||೫||

ನವನಾಳಿಕೇರಕದಳೀಫಳಪ್ರಸರದಿಂ |
ವಿವಿಧತರಸುರಭಿರಸವೀಟಿಕಾವಿಸರದಿಂ ||೬||

—ಇತ್ಯಾದಿ.

---

ಸತ್ಯಧರ್ಮ ಸುಶೀಲ ಸರ್ವಜನ ಪರಿಪಾಲ |
ನಿತ್ಯ ನಿರ್ಮಳಚರಿತ ಗುಣಭರಿತ ||೧||

ಭೂರಿರವಿಸಂಕಾಶ ಭೂದೀನರಕ್ಷೇಶ |
ಕಾರುಣ್ಯ ವಿಖ್ಯಾತ ಕಾಮಿತಪ್ರತಿದಾತ ||೨||

ಉತ್ಸಾಹಕ್ಕುದಾಹರಣಂ—

ಯಾರು ಏಕೆ ಬಂದಿಯೆನೆ ವಿ – ಚಾರವನ್ನು ಮಾಡುವಂಥ |
ಪಾರುಪತ್ಯವಿತ್ತವನ್ನ – ತೋಱಿಕೊಟ್ಟು ನುಡಿಯಬೇಕು ||೧||

ಮಂಗನಂತೆ ಪಲ್ಲಕಿಸಿದು – ತುಂಗಸಾಸಿಯೆಂದು ಬಱಿದೆ |
ಹಿಂಗದೆನ್ನಕೂಡೆ ವಿಕ್ರ – ಮಾಂಗವನ್ನು ಮೆಱಿಸಲೇಕೆ ||೨||

ಮೊಗವ ಕಂಡರಿಂಗ ಮರ್ಕಟಗಳ ಪೋಲುತೋಱುತಿರ್ಪುದು |
ವಿಗಡತನದ ಮಾತುಗಳನೆ ಬೊಗಳಬೇಡ ಸಾಕು ॥ ೩ ॥

---

ಅಟ್ಟ ಅನ್ನವುಣ್ಣ ಬಿಡನು – ಕೊಟ್ಟ ಸಾಲ ಕೇಳಬಿಡನು |
ಪೆಟ್ಟಿಯೊಳಿಹ ಚಿನ್ನದೊಡವೆ – ತೊಟ್ಟಿನೆನಲು ಬಿಡನು ॥ ೧ ॥
ಅಕ್ಕನಿಲ್ಲಿ ಕರೆಯಲಿಲ್ಲ – ಮಕ್ಕಳನ್ನು ಪಡೆಯಲಿಲ್ಲ ॥
ದುಃಖಗೊಂಡು ಕಣ್ಣ ನೀರ – ನುಕ್ಕಿಸುವರೆ ಯಮನು ಬಿಡನು ॥ ೨ ॥
ಹೇಳಿನೆಂಬರಿಷ್ಟರಿಂಗೆ ಬೇಳೆಬೆಲ್ಲ ಹೊನ್ನ ತಂದು |
ನಾಳೆ ಮಗನ ಮದುವೆಯೆನಲು ಕಾಳಬೆನ್ನ ಬಿಡನು ॥ ೩ ॥
ಮಾಳಿಗೆಯದು ಮನೆಯುಮಿರಲಿ – ಜಾಳಿಗೆಯೊಳು ಹೊನ್ನುಮಿರಲಿ |
ಆಳುಮಂದಿಯಾಸೆಯಿರಲಿ – ಕಾಳಬೆನ್ನ ಬಿಡನು ॥ ೪ ॥
ಪ್ರೇಮವಾಸ ಸದ್ಗುಣೈಕ – ಧಾಮ ಸೂರ್ಯಕೋಟಿ ಭಾಸ |
ಕೋಮಲಾಂಗ ಸಂತತಾಭಿ – ರಾಮ ನಿರ್ಮಲಾಂತರಂಗ ॥ ೫ ॥
ಸಂಕುಲಾರ್ಶಿ ನಿಗ್ರಹಾತ್ಮ – ಶಂಕಿತಾತ್ಮ ಧೈರ್ಯಕರ್ತ |
ಕಿಂಕರೀಕೃತೋರ್ವಿರಾಜ – ಪಂಕವೈರಿ ಪುಣ್ಯಪಾಕ ॥ ೬ ॥

(ಇಲ್ಲಿಂದ ಮುಂದಿರುವ ಸೀಸಪದ್ಯದ ಲಕ್ಷಣ ಲಕ್ಷ್ಯಗಳು ಹಿಂದೆ ಪುಟ ೬೧ರಲ್ಲಿ ಕೊಟ್ಟಿದೆ.)

ಆಟಗೀತೆ—

ವಿಗತದುಷ್ಕೃತಾಂಗ ವಿಮಲಸುಸ್ಥಿರ ಚಿತ್ತ |
ಗಗನ ಪೀರವಾಸ ನಪ್ರಪ್ರೀತ
ನಗಕುಲಾದಿಧಾತ ಮುನಿಸುರಾಸುರವಂದ್ಯ ॥
ಜಗಪರಿಣುತರಾಜ ಕೇವಲದಾತ ॥ ೧ ॥

ಚೌಪದಿಯ ಲಕ್ಷಣಂ—

ಎಸೆವ ಚೌಪದಿಗೆ ಪದಿನೆಂಟು ಮಾತ್ರೆಗಳು |
ಸಸಿನೆ ಯತಿಯೆಂಟಱೊಳು ಪಸರಿಸುತಿರಲು ॥
ಹಸನಾಗಿ ನಾಲ್ಕು ಪದ ಸಮನಾಗಿ ಬರಲು |
ಬಿಸಜಾಕ್ಷಿ ಪ್ರಾಸುತಿಳಿ ಮೊದಲೊಳಕಡೆಯಿರಲು ॥ ೨ ॥

[1]ಪ್ರಾಚೇತಸಾಖ್ಯ ಮುನಿಪತಿಯ ಬಲವಂದು |
ವಾಚಸ್ಪತಾಚಾರ್ಯನಡಿಗೆಱಗಿ ನಿಂದು ||
ಗುರುಹಿರಿಯರಂಘ್ರಿಯಂ ನೆನೆದು ಮಾನಸದಿ |
ಧರೆಯಕವಿಗಳಿಗೆ ಕೈಯ್ಮುಗಿದು ಸಂತಸದಿ ||೩||

---

[2]ಮಗನೆ ನೀನಿಂತೞಿಯೆ ಸೈರಿಪೆನೆಂತೋ ಪೇೞಯ್ ಶಂಕರಾ |
ಸುಗುಣನಿಧಿ ನೀನೆನ್ನ ಮೊಱೆಗಳನೊರ್ವೆ ಕೇೞಯ್ ಶಂಕರಾ ||೧||
ಪರಸಿ ಪಾಡಿ ಮಹೇಶನಿಂದವೆ ಬೇಡಿ ಮುನ್ನಂ ಶಂಕರಾ |
ತುರುಗ ಖುರಕೆಂದಕಟ! ಪೆತ್ತೆನೆ ಕುವರ ನಿನ್ನಂ ಶಂಕರಾ ||೨||
ಎಂತು ಮಱೆವೆನೊ ಸವಿಯ ಪಾಲಿಡುವವಮುರ್ದನಗೆಯಂ ಶಂಕರಾ |
ಕಾಂತಿಶೋಭಿಸಿ ಮುದ್ದುವೀರುವ ಮೊಗದ ಬಗೆಯಂ ಶಂಕರಾ ||೩||
ಝಣಝಣಿಪ ಕಿಱುಗೆಜ್ಜೆ ಕರತಳ ತಾಳರವಕೇ ಶಂಕರಾ |
ಕುಣಿವ ನಿನ್ನಯ ಬಿನದವೊಪ್ಪುಗುಮೆನ್ನಮನದೆ ಶಂಕರಾ ||೪||

ಲಯಗ್ರಾಹಿವೃತ್ತ—

[3]ಧೀರ ಜನರಿಂ ಶ್ರುತಿ ವಿಚಾರ ಪರರಿಂ ಲಸದುದಾರಗುಣರಿಂ ದುರಿತದೂರ ನಿಜಭಕ್ತ್ಯಾ |
ಚಾರಯುತರಿಂ ನಿಗಮಸಾರಮತರಿಂ ಸುಭಗದಾರನುತರಿಂ ಹರಿಕುಮಾರ ವರಮಾರಾ ||
ಕಾರಮುಹರಿಂ ವಿವಿಧ ವೀರಭಟರಿಂ ವಿಚಿತಶೂರಪರರಿಂ ತುರಗವಾರಗಜಶಿಕ್ಷಾ |
ಭಾರವಹರಿಂ ಮಿಳದಪಾರಧನರಿಂ ಮೆಱೆಗುಮಾರುಚಿರ ಪಟ್ಟಣಮಿಳಾ ರಮಣಯುಕ್ತಂ ||

ಅಷ್ಟಪದಿ—

ಹಯಗಳ ಕರಿ ಘ |
ಟೆಯುಗಳ ಬಲಿದೊಂ |
ಟೆಯುಗಳ ಮೇಣ್ ಕ |
ತ್ತೆಯುಗಳ ಪನ್ನಗ |

---

(1) ಇದು ರಾವಣ ದಿಗ್ವಿಜಯದಲ್ಲಿದೆ (ಯಕ್ಷಗಾನ ಗ್ರಂಥ, ಬಹಳ ಅರ್ವಾಚೀನವಾದುದು), (2) ಇದು ರಾಜಶೇಖರವಿಲಾಸದಲ್ಲಿರುವುದು, (3) ಈ ಪದ್ಯವು "ಬೆಳಿಗಿ ಅರಸರ ವಂಶಾವಳಿ" ಎಂಬ ಗ್ರಂಥದಲ್ಲಿಯೂ ಕಂಡುಬರುವುದು.

ಚಯಗಳ ಬಿಗಿದ |
ಶ್ವಯುಗಳ ಸಹಿರ |
ಣ್ಮಯುಗಳ ಸುರಥಾ |
ಲಯುಗಳೊಳುಲಿಉತ ||
ನಡೆಯುವರಾಗಳ್—

ತೇರ್ಗಳ ಚೀತ್ಕೃತಿ |
ವಾರ್ಗಳ ಹಾರ್ಕೆಸು |
ರಾರ್ಗಳ ಧನುಟಂ |
ಕಾರ್ಗಳ ಡಾಯುಧ |
ಧಾರ್ಗಳ ಸೊನಪದ |
ಚಾರ್ಗಳ ಬೊಬ್ಬೆಯೊ |
ಳೊರ್ಗಳೆದಂಬರ |
ಮಾರ್ಗದೊಳುಲಿವುತ ||
ನಡೆಯುವರಾಗಳ್—

ಪಲ್ಲವಂ—

*ಏನಮಾಟ್ವಿದಶಾನನೇಂದ್ರನ – ಹೀನಕೃತ್ಯಕ್ಕಿನ್ನು ಧನಪನ |
ಸೂನು ದುರ್ಮತಿಗಾನು ಪುಗೆ ಸುಂ – ಮಾನವಟಾದನು ಮಾನವಾಯ್ತಿದಕೆ ||

ಪದಂ—

ಏತಕೀ ಪಥವಾತು ಬಂದೆನೊ – ಧಾತುಗೆಟ್ಟಕೆಱದಿ ಮೇಣ್ ದು |
ಷ್ಟಾತುಮಾಧನುನೀತ ನಿಹೆ ಸಂ – ಕೇತಮೊಂದು ಭರದಿ ತಿಳಿಯದೆ ||
ಭೀತಿಯುಟಾದೀರೀತಿಯಿಂದ – ಜ್ಯೊತ ಖಳನ ಕರದಿ ಸಿಲುಕಿ ಏ |
ಘಾತಿಸಿತು ಸುಪ್ರೀತಿಗಿತ್ತಿಹ ಮಾತಿದಿಂದುವಿರದೆ ನುಡಿ ಪ್ರ ||
ಖ್ಯಾತಮಾಗಿದು ನೀತಿದಪ್ಪಿದ – ಪಾತಕದಿ ನೆರೆದೇತಱದು ಸುಖ |
ಮಾತುರದೊಳು ನಡೆದೆ ಸತಿಯರ ||
ಜಾತಿಗುಣವ ಬಿಡದೆ ನಾಂ ನಿ |
ರ್ಹೇತಿಯಿಂದೀ ಯಾತುಧಾನ ನಿ – ಗಾತಿಶಯದೊಳು ಸೋತೆನಕಟಕಟ ||

ಪಲ್ಲವಂ—

ಪರರ ಗೊಡವೆಯುದಿರದೆ ಹೊಱಡಲಿ ನರರಕುಲದಿಂ |
ಪಿರಿಯ ಕರುಣೆಯೊಡೆಯಗೆ ಪರಸಿ ಭಜಿಸಿರಿ ಸರಿಸಬಲದಿಂ ||

* ಇದೂ ರಾವಣ ದಿಗ್ವಿಜಯದಲ್ಲಿದೆ.

ಪದಂ—

ಕಡೆಯಕಾಣಿಸು ತಡಿಸು ವಿಘ್ನವ ನಡಿಸು ಸುಗತಿಗೆ ನಮ್ಮ ನೀನೇ |
ಒಡೆಯ ನೀನೆಯ್ ಕೊಡುವುದಿಷ್ಟವೆ ಬಿಡಿಸು ಲೋಕದ ಹಮ್ಮ ||
ನಡಿಸು ಸತ್ಯವ ಕೆಡಹು ಮಿಥ್ಯೆಯ ಸುಡೆಲೆ ಮಲಿನತೆಯೆಲ್ಲ ಮನವೇ |
ತಡೆಯದೆಡೆವಿಡದೊಡೆಯನಲ್ತಿಯ ನುಡಿದು ಕೀರ್ತಿಯಸೊಲ್ಲ ||

---

(೫ನೆಯ ಅಧಿಕಾರದ ೨೧ನೆಯ ಪದ್ಯವಾದಬಳಿಕ ಈ ಷಟ್ಪದಿಯಲಕ್ಷಣಗಳಿವೆ.)

ಶರಷಟ್ಪದಿ—

ಚರಣಗಳೆರಡಕೆ |
ಕರಿಲಘುಗಳು ಬರೆ |
ನಿರುತದಿ ಮೂಱನೆಯಡಿಗಳಿಗೆ ||
ಶರಧಿಯುಗಂಪೆ |
ರ್ಚಿರೆ ಶರಷಟ್ಪದಿ |
ಸರಸಿಜನಯನೇ ಸುರಮ್ಯನಿಧೀ ||೧||

ಮತ್ತೊಂದುಪಾಠ—

ಶರಕಂ ನಾಲುಕು |
ಚರಣಸುಮಾತ್ರೆಗ |
ಳಿರುತಿರ್ಪುವು ದ್ವಾತ್ರಿಂಶಗಳೂ ||
ಎರಡನೆ ಯಂಘ್ರಿಂ |
ಗೆರಡು ಚತುರ್ಥ |
ಮಱುವತ್ತಾಗಿಹುದುರುಮಾತ್ರೇ ||೨||

ಮತ್ತೊಂದುಪಾಠ—

ಶರಷಟ್ಪದಿ ಮೊದ |
ಲೆರಡು ಪದಂಗಳು |
ಸರದಲ್ಲೆಂಟು ಸುಮಾತ್ರೆಗಳು ||
ಪಿರಿಯ ಪದದ ಮೊದ |
ಲಿರೆ ಮನುಮಾತ್ರೆಗ |
ಳುರುತರದಱುವತ್ತು ಗಣನೆಯು ||೩||

(ಪು. ೭೬, ರೇಖೆಯ ಕೆಳಗೆ ೧ನೆಯ ಪದ್ಯವಾದಬಳಿಕ)

ಕುಸುಮಷಟ್ಪದಿ—

ಸೊಗಸು ವೆರಡಡಿಗಳೊಳು |
ಪೊಗೆಟ್ ದಶಲಘುಗಳಿರೆ |
ಮಿಗೆ ಮೂಱನೆಯ ಪದಕೆ ಮೇಲೆಯೇೞ್ ||
ಪೊಗಲೊಡನೆ ಮೆಱೆಯು (ವು) ತಿರೆ |
ಮೃಗನೇತ್ರೆಯಾಮತದಿ |
ಜಗದೊಳದು ಕುಸುಮಷಟ್ಪದಿ ಯೆನಿಪುದು ||೪||

ಮತ್ತೊಂದುಪಾಠ (ಝುಂಪೆತಾಳ)—

ಧರೆಯೊಳಗೆ ತಾನುಮಕ್ಕ |
ಚರಣಗಳು ನಾಲ್ಕಕ್ಕೆ |
ನೆಱೆಮಾತ್ರೆ ನಾಲ್ವತ್ತು ಮಿಕ್ಕೆರಡಕೇ ||
ಎರಡೆಂಟು ಮೇಲೊಂದು |
ವರಮಾತ್ರೆ ಕೂಡಿ ಸಂ |
ಚರಿಸುತಿಹುದೆಪ್ಪತ್ತು ನಾಲ್ಕು ಮಾತ್ರೆ ||೫||

ಮತ್ತೊಂದುಪಾಠ—

ಕುಸುಮ ಷಟ್ಪದಿಯ ಮೊದ |
ಲೆಸೆವ ಪದಯುಗ್ಮಕ್ಕೆ |
ದಶಮಾತ್ರೆಗಳು ಮೇಲಣೊಂದೊಂದು ||
ವಿಷಮಪದ ಯುಗ್ಮಕ್ಕೆ |
ಸಸಿನೆ ಹದಿನೇೞು ಭಾ |
ವಿಸಿ ನೋಡಲೆಪ್ಪತ್ತಾನಾಲ್ಕು ಮಾತ್ರೆ ||೬||

ಭೋಗಷಟ್ಪದಿ—

ಭಾನುಲಘುಗಳೆಸೆವ ಚರಣ |
ತಾನವೆರಡಕಕ್ಕು ಪಱುತ |
ನೂನವೆಂಟು ಮಾತ್ರೆ ಮಿಗಲು ಕಡೆಯ ಪಾದಕೇ ||
ಭಾನುತತಿ ಸುರಮ್ಯಮಪ್ಪ |
ದೇನನೆಂಬೆ ಭೋಗನಾಮ |
ನಾನುರಾಗಮಪ್ಪದಿಂದು ಸರಸಿಜಾಸನೇ ||೭||

ಮುನ್ನಿನಂಘ್ರಿಗಳ್ಗೆ ಮಾತ್ರೆ |
ಪನ್ನೆರಡು ವಿರಾಜಿಸುವುದು |
ಚನ್ನೆ ಮೇಲಣಡಿಗೆ ಮಾತ್ರೆಪತ್ತುಮೆರಡು ||
ಸನ್ನಿಸಲ್ಕೆ ಭೋಗದಾಱು |
ಚಿನ್ನಪದಗಳೊಂದು ಗೂಡಿ |
ಸನ್ನುತಾಂಗಿ ಅಷ್ಟಕೋತ್ತರಾಷ್ಟದಶಕ ಕೇಳ್ ||೮||

ಭೋಗ ಷಟ್ಪದಂಗಳೊಳಗೆ |
ಬೇಗ ಮೊದಲಪಾದ ಯುಗ್ಮ |
ಕಾಗಳಕ್ಕು ಮರ್ಕಮಾತ್ರೆ ಲೆಕ್ಕಸಂಖ್ಯೆಯೂ ||
ಮೇಗಣೊಂದಱೊಂದು ಪಾದ |
ಕಾಗಳಿಪ್ಪತುಗಳು ಕೂಡ |
ಲಾಗಳೆಂಭತೆಂಟು ಮಾತ್ರೆಗಣನೆ ರಂಜಿಕು ||೯||

ಭಾಮಿನಿಷಟ್ಪದಿ—

ಏೞೆರಡು ಮಾತ್ರೆಗಳು ಚರಣಗ |
ಳೋೞಯೆರಡೊಳಿರ್ಕೆ ಸಂತತ |
ವಾೞ ನವಲಘುಗಳನೆ ಮೂಱನೆಯಂಗವೆಗ್ಗಳಿಸಿ ||೧೦||

ಮತ್ತೊಂದುಪಾಠ (ತಿವುಡೆತಾಳಂ)—

ಚಂದದಲಿ ಭಾಮಿನಿಯ ಷಟ್ಪದಿ |
ಗಂದವಾದಿಯ ಪಾದಗಳಿಗಾ |
ನಂದದಿಂ ಮನುಮಾತ್ರೆ ಮೇಲಣ ಪಾದಕೊಂದೊಂದು ||
ಕುಂದದಿಹುದಿಪ್ಪತ್ತುಮೂಱಂ |
ತೊಂದುಗೂಡಿಸು ವಾಱು ಪಾದಕೆ |
ಮಂದಗತಿ ನೂಱೆರಡುಮಾತ್ರೆಯ ಗಣನೆಯೆಯ್ದಿಹುದು ||೧೧||

ಮತ್ತೊಂದುಪಾಠ—

ಭಾಮಿನಿಯ ಷಟ್ಪದಿಯ ಮೊದಲೊಳ |
ಗಾ ಮಹಾಪಾದದ್ವಯಂಗಳು |
ನೇಮಿಸಲು ಮನುಮಾತ್ರೆ ಮೇಲಣಪಾದವೊಂದೊಂದು ||
ನೇಮದಿಂದಿರ್ಪತ್ತುಮೂಱಱ |
ನಾಮಗಳನೊಂದೊಂದು ಕೂಡಲು |
ಭೂಮಿಯೊಳು ನೂಱೆರಡು ಮಾತ್ರೆಯ ಗಣನೆ ರಂಜಿಸುಗು ||೧೨||

ಪರಿವರ್ಧಿನಿಷಟ್ಪದಿ—

ಮೊದಲ ಚರಣಗಳಿಗೊದವಿದ ಮಾತ್ರೆಯು|
ಪದಿನಾಱೆನಿಸುಗು ಮುಪರಿ ಪದಗಳಿಗೆ|
ಸದಮಳ ಋತುಯುಗ ವಿಂಶತಿ ಮಾತ್ರೆಗಳತಿಶಯದಿಂದೆಸೆಗುಂ||
ಮುದದಿಂದಾಱು ಪದಂಗಳಿಗಾಗಿಹು|
ದಿದು ಪರಿವರ್ಧಿನಿ ಷೋಡಶ ಶತದಿಂ|
ದುದಿತ ಸುಮಾತ್ರೆಗಳೊಪ್ಪುಗು ಜಗತೀವಲಯದಿ ಕವಿಮತದಿಂ||೧೩||

ಮತ್ತೊಂದುಪಾಠ—

ಪರಿವರ್ಧಿನಿ ಷಟ್ಪದಿಗಾ ಮೊದಲಲಿ|
ಯೆರಡುಪದಂಗಳು ಷೋಡಶಮಾತ್ರೆಗ|
ಳುರುತರದಿಂ ಮೇಲೊಂದೊಂದು ಷಡ್ವಿಂಶತಿ ಮಾತ್ರೆಗಳು||
ನಿರುತಂ ಪದವಾಱುಂ ಕೂಡಲು ಶತ|
ವಿರೆ ಮೇಲಧಿಕಂ ಷೋಡಶಮಾತ್ರೆಗ|
ಳುರುತರ ವಿಶಾತೆಱದಿಂ ನೆಱೆಬಲ್ಲವ ರಾಲಿಪುದೊಲವಿಂದ||

ವಾರ್ಧಕಷಟ್ಪದಿ—

ವಾರ್ಧಕ್ಯ ಷಟ್ಪದಮದೆಂತೆನಲು ಮೊದಲ ಪಾ|
ದ ದ್ವಯಂ ವಿಂಶತಿಂ ವಿಂಶತಿಂ ಮಾತ್ರೆ ಮೇ|
ಲಿರ್ದುದೊಂದೊಂದು ಪಾದಂಗಳುಂ ಬತ್ತೀಸ ಬತ್ತೀಸ ಮಾತ್ರೆಯಿಂದೆ||
ಪೊರ್ದಿರ್ದ ಷಟ್ಪದಂಗಳ ಕೂಡಿ ಮೇಳವಿಸೆ|
ಯಿರ್ದುದದು ನೂಱನಾಲ್ವತ್ತು ನಾಲ್ಕು ಮಾತ್ರೆ|
ಸಿದ್ಧಿಯಿಂದಲಿ ರಾಜಸಭೆಯೊಳಂ ತಪ್ಪದೋದಿದನು ವಿದ್ಯಾಧಿಕನೆಲೋ||

ಇಲ್ಲಿಂದ ಮುಂದೆ ಉತ್ಸಾಹವೃತ್ತದ (ಭೂಹಿತಾರ್ಥಮೆನಿಸುವ) ಲಕ್ಷಣದೊಡನೆ ಆಶ್ವಾಸ ಮುಗಿದಿದೆ.

(ಒಂದು ಪ್ರತಿಯಲ್ಲಿ ೩೦ ಓಲೆಗಳಲ್ಲಿ ಆರು ಅಧಿಕಾರಗಳು ಮುಗಿದಿವೆ, ೩೧ನೆಯ ಓಲೆಯಿಲ್ಲ. ಅದರಲ್ಲಿ ಪ್ರಾಯಶಃ ೯೧ನೆ ಪುಟದಿಂದ ಮುದ್ರಿತವಾಗಿರುವ ಪದ್ಯಗಳೂ, ಇನ್ನೂ ಹಲವು ಹೆಚ್ಚಿನ ಪದ್ಯಗಳಿರುವುವು, ಇವರಲ್ಲೂ ಪಾಠಭೇದವಿದೆ)

......................

ನನಿತನಿತಂ ದ್ವಿಗುಣಿಸುತ್ತುವೊಂದಂ ಕಳೆಯ||
ಲ್ಕನಿತಂಗುಳಂಗಳಕ್ಕುಂ|
ವನಜಾನನೆ ಯಧ್ವಯೋಗದಾ ಪ್ರತ್ಯಯದೊಳ್ ||೩೫(೭)||
ಒತ್ತಿರಡಱೆಂದೆ.. ........ .... ... ||೩೬||

ಗಗನಕೆ ಸೂರ್ಯನಕ್ಕೆ............ ||೩೭||

ಕವಿತೆಗೆ ಗಣವೆಂಟಱೊಳೀ | ದಿವಿ..... .... ||೩೮||

ತ್ರಿದಶರ ನಿಲಯದ – ವೆಸರಿನ ಗಣತತಿ – ಯೆಸೆದಿರೆ ದಿನಕರ – ಸಮಿತಿಗಳವಱೊಳೆ ಪುದಿಯೆ ನಿಜಹರನುಂ |

ಸದಮಲ ಯತಿಗಳೆ – ವಸುಕರಿಯಹಿಗಜ – ಮದ......ಲಿತ ತಿಲಕಮುಮೆನಲಿದು ಪೆಸರಿಂ ||

ದುದಧಿಯ ತೆಱದೊಳ – ಗಭಿನವಪದ ವಿರ – ಚನೆಗಳ ಸರಣಿಗ – ಳುದಯಿಪ ರಸರಸಿಕ ಕೃತಿಯಿಂ||

ದಿನನೆಱೆ – ಯುಱುವುದು – ಮನವೊಲದ ..... ಯೊಳಗತಿ ಚದುರೆಯು ಮೆನಿಪಳೆ ಪದುಳದೊಳಿದುವಂ ||೩೯||

**ಅಮರಸುಮನಸ** ದಿವಿಜರನಿಮಿಷರು ಭವರದಿತಿಸುತ ಸುರ ವಿಬುಧನಿಲಯಮಿವು ....... ತ್ರಿದೆ ಪುರಸುಗಪನತತಿಗತಿಯಿರೆ ನೆಱೆನಿಱುತಮೆನಿಕುಂ |

**ಕ್ರಮ ಗತಿಗಳನಿತಱೊಳೆ** ಯತಿದಶಕ ದಿಶಕಕುಭದೆಡೆ ಬರುತಿರೆ ಲಗವೃತ್ತ
**ಮಲಯಲಲಿತ** ಲಹರಿಕೆಯ ..ಪ ಪೆಸರಿನೊಳಿದುಘನೊಗಯಿಸಿತು ಪದದ ನಯದಿಂ ||

**ರಮಣಿಜನದ** ಸುಧೆಗಳಧಿಕತರಮಧುರ ಮಧುವಿದಕೊಸುಕವಿಕೃತಿ ಶರಧಿ ವಿಧುವೆನಿಪು ವಿವರವಧಿಗೆ ದಿವಿಜ ಬುಧ........ರ ರಚನೆ ನೆಮಯದಿಂ |

**ದಮಿತ ಗುಣಗಣಚರಿತೆ** ದರದಳಿತ ಕಮಲಮುಖಿ ಕಲಶಕುಚಯುಗಳ ಭರಿಮಣಿ ಖಚಿತಕರವಳಿಯೆ ಮನಸಿಜನಶರ...... ಉರುತರ ಶುಭದಂ ||೪೦||

**—ನಾಗವರ್ಮ ಸಮಾಪ್ತಾ—**

**ಮಂಗಳ ಮಹಾಶ್ರೀ.**

---

ತಪ್ಪಂ ಬರೆವವ ಕಡುಜಡ |
ತಪ್ಪಾತಂ ಬರೆದನೆಂದು ಬಯ್ಯಲ್ಬೇಡಿಂ ||
ತಪ್ಪಕ್ಕು ಶುದ್ಧಮಕ್ಕು |
ತಪ್ಪಿಲ್ಲದೆ ಪ್ರತಿಸಮಾನವಾಗಿಯೆ ಬರೆದೆಂ ||

—(ಎಂದು ಗ್ರಂಥ ಮುಗಿದಿದೆ)—

